

ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು.

# ಆಶ್ರಯದಾತರು



ಶ್ರೀ. ಸೋಮನಗೌಡರು ಭರಮಗೌಡರು ಕುಲಕರ್ಣಿ,
ಮು. ಹುಲಗಿನಹಟ್ಟಿ, ತಾ. ಕಲಘಟಗಿ.

# ಆಶ್ರಯದಾತರ ಬಗ್ಗೆ ಒಂದು ನುಡಿ.

ನಿತ್ಯ ಜೀವನದಲ್ಲಿ ಅನೇಕ ತರಹಗ ಜನರನ್ನು ನೋಡುತ್ತೇವೆ. ಹಲವರು ಆಡಂಬರದ ಜೀವನ ನಡೆಯಿಸುತ್ತಾರೆ. ಇನ್ನು ಕೆಲವರು ವನಸುಮದಂತೆ ಜೀವನ ನಡೆಯಿಸುವವರಿದ್ದಾರೆ. ಇಂತಹವರಿಗೆ ತಮ್ಮ ಬಗ್ಗೆ ಯಾವ ತರಹದ ಪ್ರಚಾರ ಬೇಡ, ವರ್ಣನೆ ಬೇಡ. ತಮ್ಮ ಕಾರ್ಯದಲ್ಲಿ ತಾವು ನಿರತರಾಗಿ, ಅವುಗಳನ್ನು ನಡೆಯಿಸಿಕೊಂಡು ಹೋಗುವದರಲ್ಲಿಯೇ ಅವರಿಗೆ ಆನಂದ. ಅನ್ಯರಿಗೆ ತಾವು ಉಪಕಾರ ಮಾಡಿದೆವೆಂಬ ಹೆಮ್ಮೆ ಅವರಿಗಿರುವದಿಲ್ಲ.

ಇಂತಹ ಜೀವನ ನಡೆಯಿಸುವದರಲ್ಲಿ ಶ್ರೀ. ಸೋಮನಗೌಡರೂ ಒಬ್ಬರು. ಚಿಕ್ಕದಾದ ಒಂದು ಹಳ್ಳಿಯಲ್ಲಿ ವಾಸಸ್ಥರಾಗಿದ್ದರೂ ಅನೇಕ ಧರ್ಮ ಗ್ರಂಥಗಳನ್ನು ಓದಿಕೊಂಡಿದ್ದಾರೆ. ಧರ್ಮವನ್ನು ಬೋಧಿಸಿ ಅದರಂತೆ ನಡೆಯದೆ ಇರುವವರೂ ಬಹು ಜನರು. ಆದರೆ ಇವರು ಯಾರಿಗೂ ಬೋಧಿಸಲಿಕ್ಕೆ ಹೋಗದಿದ್ದರೂ ಜೈನಧರ್ಮದ ತಿರುಳನ್ನು ತಿಳಿದುಕೊಂಡು ಅದರಂತೆ ನಡೆಯುವವರಾಗಿದ್ದಾರೆ. ಕಲಘಟಗಿ ಗ್ರಾಮಕ್ಕೆ ಜೈನಮುನಿಗಳು ಬಂದಾಗ್ಗೆ ಅವರನ್ನು ಕಂಡು ಧರ್ಮದ ಬಗ್ಗೆ ಅನೇಕ ಗಹನ ವಿಷಯಗಳನ್ನು ಚರ್ಚಿಸಿ ತಿಳಿದುಕೊಂಡವರಾಗಿದ್ದಾರೆ.

ಶ್ರೀಯುತರಿಗೆ ಮೂವರು ಗಂಡು ಮಕ್ಕಳೂ, ಒಬ್ಬ ಹೆಣ್ಣು ಮಗಳೂ ಇದ್ದು ಹಲವು ಜನ ಮೊಮ್ಮಕ್ಕಳೂ ಇದ್ದಾರೆ. ಮಕ್ಕಳಿಗೆ ಚನ್ನಾಗಿ ವಿದ್ಯಾಭ್ಯಾಸ ಮಾಡಿಸಿದ್ದಾರೆ. ಮೊಮ್ಮಕ್ಕಳೂ ಶಾಲೆಯಲ್ಲಿ ಓದುತ್ತಲಿದ್ದಾರೆ. ಇಬ್ಬರು ಮಕ್ಕಳು ರೆವ್ಹಿನ್ಯೂ ಖಾತೆಯಲ್ಲಿಯೂ, ಒಬ್ಬ ಮಗನು ವಿದ್ಯಾ ಖಾತೆಯಲ್ಲಿಯೂ ನೌಕರಿ ಮಾಡುತ್ತಾರೆ.

ಇವರು ಆಧುನಿಕರಂತೆ ಕಾಲೇಜಿನ ಶಿಕ್ಷಣ ಪಡೆಯದವರಾದರೂ ಅನೇಕ ಕನ್ನಡ, ಮರಾಠಿ ಮತ್ತು ಸಂಸ್ಕೃತ ಗ್ರಂಥಗಳನ್ನು ಓದಿ ತಿಳಿದು

ಕೊಂಡಿದ್ದಾರೆ. ಇವರಿಗೆ ವ್ಯಾಸಂಗದಲ್ಲಿ ಅಭಿರುಚಿ ಬಲು ಹೆಚ್ಚು. ಇವರು ಅನೇಕ ನಾಟಕ, ಬೈಲಾಟಗಳನ್ನು ಬರೆದು ತಮ್ಮ ಊರ ರೈತ ಜನರಿಂದ ಅವುಗಳನ್ನು ರಂಗಸ್ಥಳದ ಮೇಲೆ ಆಡಿಸಿ ತೋರಿಸಿದ್ದೂ ಉಂಟು. ಅವುಗಳಲ್ಲಿ " ಜಿನಭಾರತ " ದಂತೆ ಬರೆದ ಒಂದು ಆಟವೂ ಉಂಟು. ಜಿನಮತದ ಗ್ರಂಥಗಳಲ್ಲಿಯ ವಿಚಾರಗಳನ್ನು ಜನರೆದುರು ಇಟ್ಟು ಅವುಗಳನ್ನು ಪ್ರಚಾರ ಮಾಡಿದ್ದೂ ಉಂಟು. " ಜೀವಂಧರ ಚರಿತ್ರೆ " ಮೊದಲಾದ ಸದ್ಗ್ರಂಥಗಳನ್ನು ಹಳ್ಳಿಯ ರೈತರಿಗಾಗಿ ಅನೇಕ ರಾತ್ರಿಗಳ ವರೆಗೆ ಓದಿ ತಿಳಿಸಿ ಹೇಳಿದ್ದೂ ಉಂಟು. ತಮ್ಮ ಜೀವನದಲ್ಲಿ ಅವರು ಮಾಡಿದ ಕೃತಿಗಳನ್ನು ಅವರ ನಿಕಟ ವರ್ತಿಗಳಿಂದ ಕೇಳಿ, ಅವರು ಒಬ್ಬ ತ್ಯಾಗಿಗಳೆಂದೇ ನಮ್ಮ ಭಾವನೆಯಾಗಿದೆ.

ಅನುಕೂಲತೆಗಳು ಇಲ್ಲದಿದ್ದರೂ, ಇದ್ದುದರಲ್ಲಿಯೇ ಅನುಕೂಲತೆ ಮಾಡಿಕೊಂಡು, ಜೈನ ಧರ್ಮವನ್ನು ಅರಿತು, ಅದರಂತೆ ನಡೆಯುವ ಇವರು ಈ " ಧನ್ಯಕುಮಾರ ಚರಿತ್ರೆ " ಯನ್ನು ಪ್ರಕಾಶನಕ್ಕೆ ತರಲು ಒಪ್ಪಿಕೊಂಡು ಅದನ್ನು ಬೆಳಕಿಗೆ ತಂದಿರುತ್ತಾರೆ. ಆಧುನಿಕ ಶಿಕ್ಷಣವಂತರಾದ ಈ ಎಲ್ಲ ಜನರೂ ಧರ್ಮಾಭಿಮಾನಿಗಳಾಗಿ ಧರ್ಮದಿಂದ ನಡೆಯುವವರಾಗಿದ್ದಾರೆಂದು ಹೇಳಲು ನಮಗೆ ತುಂಬಾ ಸಂತೋಷವಾಗುತ್ತದೆ.

ಇತಿ,

ಬೆಳಗಾವ.
ತಾ|| ೫-೧೦-೧೯೫೩. } **ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು.**

# ಶ್ರೀಧನ್ಯಕುಮಾರನ ಚರಿತ್ರೆಯು.



ಶ್ರೀಮಂತಂ ತಂ ಜಿನಂ ನತ್ವಾ ಕೇವಲಜ್ಞಾನಲೋಚನಮ್ ||
ವಕ್ಷ್ಯೇ ಧನ್ಯಕುಮಾರಸ್ಯ ವೃತ್ತಂ ಭವ್ಯಾನುರಂಜನಮ್ || ೧ ||

ಅರ್ಥ:—ಗರ್ಭಶ್ರೀಮಂತನಾದಂಥ, ಯಾವತ್ತೂ ಕರ್ಮಗಳನ್ನು ಗೆದ್ದಂಥ, ಕೇವಲ ಜ್ಞಾನವೆಂಬ ಕಣ್ಣುಗಳುಳ್ಳಂಥ ಶ್ರೀ ವೀತರಾಗ ಜಿನರಿಗೆ ಮಂಗಲಾಚರಣದ ಸಲುವಾಗಿ ನಮಸ್ಕಾರ ಮಾಡಿ, ಸರ್ವ ಭವ್ಯ ಜೀವಿಗಳನ್ನು ಆನಂದಪಡಿಸುವಂಥ ಸರ್ವಶ್ರೋತೃ ಸಮಾಜದ ಪಾಪನಿವಾರಣೆಯನ್ನು ಮಾಡಿ, ಸ್ವರ್ಗ ಮೋಕ್ಷಾದಿ ಸೌಖ್ಯಗಳನ್ನು ಕೊಡುವಂಥ ಶ್ರೀಧನ್ಯಕುಮಾರನ ಚರಿತ್ರವನ್ನು ಪ್ರಾರಂಭಿಸುತ್ತೇನೆ.

## ೧ ನೆಯ ಪರಿಚ್ಛೇದವು.



ಈ ರಮ್ಯವಾದ ಭರತಕ್ಷೇತ್ರದ ಆರ್ಯಾ ಖಂಡದಲ್ಲಿ ಅವಂತೀ ಎಂಬದೊಂದು ದೊಡ್ಡ ಪ್ರದೇಶವಿತ್ತು. ಆದರಲ್ಲಿ ಉಜ್ಜಯನೀ ಎಂಬ ದೊಡ್ಡ ಶಹರವಿದ್ದು ಅಲ್ಲಿ ಅವನಿಪಾಲನೆಂಬೋರ್ವ ಜೈನ ರಾಜನು ತನ್ನ ಪಟ್ಟದ ಹೆಂಡತಿಯಾದ ಲಕ್ಷ್ಮೀಮತಿ ಎಂಬುವಳೊಡನೆ ಸುಖದಿಂದ ರಾಜ್ಯವಾಳುತ್ತಿದ್ದನು. ಅದೇ ಪಟ್ಟಣದಲ್ಲಿ ಧನಪಾಲನೆಂಬುವನೊಬ್ಬ ಸಾವುಕಾರನು ತನ್ನ ಹೆಂಡತಿಯಾದ ಪ್ರಭಾವತಿಯ ಸಂಗಡ ಸೌಖ್ಯದಿಂದಿದ್ದನು. ಅವರಿಗೆ ದೇವಪಾಲ, ಕನಕಪಾಲ, ಗುಣಪಾಲ, ರತ್ನಪಾಲ, ಹೇಮಪಾಲ, ನಾಗಕುಮಾರ ಮತ್ತು ರೂಪಕುಮಾರ ಈ ಪ್ರಕಾರ ಏಳು ಜನ ಗಂಡುಮಕ್ಕಳಿದ್ದರು. ಹಿರೇ ಮಗನಾದ ದೇವಪಾಲನು ವ್ಯವಹಾರ ಉದ್ದಿಮೆಯನ್ನೂ, ಎರಡನೆಯವನು ಅಂಗಡಿ ಕೆಲಸವನ್ನೂ, ಮೂರನೆಯವನು ಚಿನಿವಾಲಿಕೆ

ಯನ್ನೂ, ನಾಲ್ಕನೆಯವನು ಅರವಿಯ ಅಂಗಡಿಯನ್ನೂ, ಉಳಿದ ಮೂರು ಜನರು ಸಣ್ಣವರಿದ್ದದರಿಂದ ಸಾಲೆಯಲ್ಲಿ ಅಭ್ಯಾಸವನ್ನೂ ಮಾಡುತ್ತಿದ್ದರು. ಈ ಪ್ರಕಾರ ಧನಪಾಲನು ತನ್ನ ಏಳು ಮಂದಿ ಮಕ್ಕಳೊಡನೆ ಸೌಖ್ಯದಿಂದ ಕಾಲ ಕಳೆಯುತ್ತಿದ್ದನು.

ಒಂದಾನೊಂದು ದಿವಸ ಆ ಸಾವುಕಾರನ ಹೆಂಡತಿಯಾದ ಪ್ರಭಾವತಿಯು ತನ್ನ ನಾಲ್ಕನೇ ಸ್ನಾನವನ್ನು ತೀರಿಸಿಕೊಂಡು ನಿದ್ದೆಗೆಯ್ಯುತ್ತಿರಲು ಆಕೆಯು ಬೆಳಗು ಮುಂಜಾವಿನ ಕನಸಿನಲ್ಲಿ ಒಂದು ಬಿಳೀ ಎತ್ತನ್ನೂ, ಸರ್ವ ಕಲೆಗಳಿಂದ ತುಂಬಿದಂಥ ಚಂದ್ರನನ್ನೂ ಸೂರ್ಯನನ್ನೂ, ಸಮುದ್ರವನ್ನೂ ಫಲಪುಷ್ಪಾದಿಗಳ ಭಾರದಿಂದ ಭರಿತವಾದಂಥ ಕಲ್ಪವೃಕ್ಷವನ್ನೂ ಕಂಡಳು. ಇಷ್ಟರಲ್ಲಿ ಉದಯಾಚಲದಲ್ಲಿ ಸೂರ್ಯನು ಕೋಟಿ ಕಿರಣಗಳಿಂದ ಪ್ರಕಾಶನಾದನು. ಆಗ್ಗೆ ಆಕೆಯು ತನ್ನ ಶಯನಮಂಟಪವನ್ನು ಬಿಟ್ಟು ಸ್ನಾನಾದಿ ಪ್ರಾತಃರ್ವಿಧಿಗಳನ್ನು ತೀರಿಸಿಕೊಂಡು, ಶುದ್ಧಮನಸ್ಸಿನಿಂದ ಚೈತ್ಯಾಲಯಕ್ಕೆ ದೇವದರ್ಶನದ ಸಲುವಾಗಿ ತನ್ನ ಪ್ರಿಯ ಪತಿಯೊಡನೆ ಹೋದಳು. ಜಿನ ಮಂದಿರದಲ್ಲಿ ತ್ರಿಕರ್ಣಶುದ್ಧಿಯಿಂದ ಶ್ರೀಜಿನೇಶ್ವರನ ಪೂಜಾರ್ಚನ ವಿಧಿಗಳನ್ನು ತೀರಿಸಿಕೊಂಡು ಅಲ್ಲಿಯೇ ಕೂತಿದ್ದ ಧರ್ಮಸಾಗರ ಮುನಿವರ್ಯರಿಗೆ ವಂದಿಸಿ, ತಾನು ರಾತ್ರಿಯಲ್ಲಿ ಕಂಡ ಸ್ವಪ್ನದ ಫಲವನ್ನು ಸ್ವಾಮಿ ಮಹಾರಾಜರಿಗೆ ಕೇಳಲನುವಾದಳು. ಅದಕ್ಕೆ ಧರ್ಮಸಾಗರ ಮುನಿವರ್ಯರು—"ಮಗಳೇ, ಶ್ರೀಕೃಪೆಯಿಂದ, ಒಳ್ಳೆಯದಾತನೂ. ಭಾಗ್ಯಶಾಲಿಯೂ, ಉದಾರನೂ, ಸುಂದರನೂ ಆದಂಥ ಇನ್ನೊಬ್ಬ ಪುತ್ರನು ನಿನ್ನ ಉದರದಲ್ಲಿ ಉದ್ಭವಿಸತಕ್ಕವನಿರುವನಾದ್ದರಿಂದ, ಈ ಐದು ಚಿನ್ಹೆಗಳು ನಿನಗೆ ಸ್ವಪ್ನದಲ್ಲಿ ಕಂಡಿರುವವು" ಎಂದು ಮುನಿಶ್ರೇಷ್ಠರು ಹೇಳಿದರು ತರುವಾಯ ಆ ಸತೀಶಿರೋಮಣಿಯು ಪುನಃ ಮುನಿಗಳಿಗೆ ವಂದಿಸಿ, ಮನೆಗೆ ನಡೆದಳು.

ಇಷ್ಟಾದ ಬಳಿಕ ಕೆಲವು ದಿವಸಗಳ ಮೇಲೆ ಆಕೆಯು ಜಿನಪೂಜೆ, ಸತ್ಪಾತ್ರದಾನ, ತೀರ್ಥಯಾತ್ರೆ ಮೊದಲಾದ ಸತ್ಪಾತ್ರದ ಕೆಲಸಗಳನ್ನು ಬಹಳ ಹಣ ವೆಚ್ಚಮಾಡಿ, ತನ್ನ ಗಂಡನಾದ ಧನಪಾಲನಿಂದ ಪೂರ್ಣ

ಮಾಡಿಸಿದಳು. ಮುಂದೆ ಒಂಬತ್ತು ತಿಂಗಳು ತುಂಬಿದ ಮೇಲೆ ಶುಭ ಮುಹೂರ್ತದಲ್ಲಿ ಮುನೀಶ್ವರರು ಹೇಳಿದಂತೆ ಆಕೆಗೆ ಒಂದು ಪುತ್ರರತ್ನ ವಾಯಿತು. ಆಗ್ಗೆ ಆ ಕೂಸಿನ ನಾಭಿಛೇದನವನ್ನು ಮಾಡಿ (ಹುರಿಕೊಯ್ದು) ಅದನ್ನು ಹುಗಿಯುವದರ ಸಲುವಾಗಿ ನೆಲವನ್ನು ಅಗಿಯುವಷ್ಟರಲ್ಲಿ ದ್ರವ್ಯ ದಿಂದ ತುಂಬಿದ್ದೊಂದು ಕೊಡವು ಧನಪಾಲನ ದೃಷ್ಟಿಗೆ ಬಿತ್ತು. ಆದರೆ ಲೌಕಿಕಕ್ಕೆ ಅಂಜಿ ಆ ಧನಪಾಲನು ಆ ಸ್ಥಳವನ್ನು ಹಾಗೇ ಮುಚ್ಚಿ ಮತ್ತೊಂದು ಕಡೆಗೆ ನೆಲವನ್ನು ಅಗಿಯಹತ್ತಿದನು. ಅಲ್ಲಿಯೂ ಮೊದಲಿ ನಂತೆ ಮತ್ತೊಂದು ದ್ರವ್ಯ ತುಂಬಿದ ಕೊಡವು ಆತನ ದೃಷ್ಟಿಗೆ ಬಿತ್ತು. ಇದನ್ನು ನೋಡಿ ಧನಪಾಲ ಸಾವುಕಾರನು ಆಶ್ಚರ್ಯಚಕಿತನಾದನು. ಆಗ್ಗೆ ಆತನು ತನ್ನ ಮನಸಿನಲ್ಲಿ ಆಲೋಚಿಸಿ—“ ನಾನು ಎಲ್ಲಿ ಹೋದಾಗ್ಯೂ ಈ ತರದ ದ್ರವ್ಯನಿಧಿಯು ನನ್ನ ದೃಷ್ಟಿಗೆ ಬೀಳುವದು ಈಗಲೇ ಉದ್ಭವಿಸಿದ ಶಿಶುವಿನ ಪುಣ್ಯಾತಿಶಯದಿಂದಲೇ ಹೊರ್ತು ಮತ್ತೊಂದಿಲ್ಲ ಆದ್ದರಿಂದ ಈ ದ್ರವ್ಯವು ನಾನು ತಕ್ಕೊಳ್ಳಲಿಕ್ಕೆ ಯೋಗ್ಯವಾದದ್ದದೆ. ಆದಾಗ್ಯೂ ಈ ಸಂಗತಿಯನ್ನು ನಮ್ಮ ಪಟ್ಟಣದ ಅರಸನಿಗೆ ತಿಳಿಸಿದ ಹೊರ್ತು ತಕ್ಕೊಳ್ಳು ವದು ಯೋಗ್ಯವಲ್ಲವೆಂದು ತಿಳಿದು, ಆ ದ್ರವ್ಯವನ್ನೆಲ್ಲ ಸಂಗಡ ತೆಗೆದು ಕೊಂಡು ಅರಸನ ಬಳಿಗೆ ಹೋಗಿ, ರಾಜನಿಗೆ ವಂದಿಸಿ, “ ಹೇ ರಾಜನೇ! ಇಂದಿನ ದಿವಸ ನನಗೆ ಈ ನಿಧಿಯು ದೊರಕಿರುವದು. ಇದು ತಮ್ಮ ಭೂಮಿ ಯಲ್ಲಿಯೇ ಸಿಕ್ಕಿರುವದರಿಂದ ಇದು ತಮ್ಮದಾಯಿತು; ಇದನ್ನು ನೀವು ತೆಗೆದುಕೊಳ್ಳಿರಿ.” ಎಂದು ಬಿನ್ನವಿಸಿದನು. ಇದನ್ನು ಕೇಳಿ ಅರಸನು ಧನಪಾಲನಿಗೆ—“ ಎಲೈ ಸಾವುಕಾರನೇ, ನಿನ್ನ ಪುತ್ರನ ಪುಣ್ಯದಿಂದಲೇ ಈ ಭಂಡಾರವು ನಿನಗೆ ಸಿಕ್ಕಿದೆ. ಆದ್ದರಿಂದ ಇವಕ್ಕೆ ನೀನೇ ಮಾಲಕನಿರುವಿ; ಇದರಲ್ಲಿ ನನ್ನದೇನೂ ಹಕ್ಕಿಲ್ಲ, ನೀನೇ ತೆಗೆದುಕೊಂಡು ಹೋಗು.” ಎಂದು ಅಪ್ಪಣೆ ಮಾಡಿದನು. ಈ ಪ್ರಕಾರ ಅರಸನಾಡಿದ ಮಾತುಗಳನ್ನು ಕೇಳಿ ಧನಪಾಲನು ಅತ್ಯಾನಂದದಿಂದ ಆ ದೊರೆತ ದ್ರವ್ಯವನ್ನೆಲ್ಲ ತೆಗೆದುಕೊಂಡು ಮನೆಗೆ ಬಂದನು. ಮತ್ತು ತನ್ನ ಅಣ್ಣತಮ್ಮಂದಿರರಿಗೆ ಪುತ್ರಜನ್ಮೋತ್ಸವ ವನ್ನು ಮಾಡಲಿಕ್ಕೆ ತಿಳಿಸಿ, ಧ್ವಜಾ, ತೋರಣ, ಮಂಟಪ, ಪತಾಕಿ, ರಂಗೋಲಿ ಮುಂತಾದವುಗಳಿಂದ ಪಟ್ಟಣವನ್ನು ಶೃಂಗರಿಸಿ, ನೃತ್ಯ-ಸಂಗೀತ

ವಾದ್ಯಗಳಿಂದ ತನ್ನ ಶಹರವನ್ನು ಶೋಭಾಯಮಾನ ಮಾಡಿದನು. ಜಿನ ಮಂದಿರದಲ್ಲಿ ಪಂಚಕಲ್ಯಾಣ, ಪ್ರತಿಷ್ಠಾ, ಮಹಾಭಿಷೇಕ ಮೊದಲಾದ ಪೂಜಾ ಸಮಾರಂಭಗಳನ್ನು ಮಾಡಿಸಿದನು; ಬಡವರಿಗೂ ಅನಾಥರಿಗೂ ಅನ್ನವಸ್ತ್ರಾದಿಗಳಿಂದ ಪೂರಿತ ಮಾಡಿ ಸೌಖ್ಯಗೊಳಿಸಿದನು. ಹದಿಮೂರನೇ ದಿವಸ ಪ್ರತಿದಿವಸಕ್ಕಿಂತಲೂ ಹೆಚ್ಚಿಗೆ ಪೂಜಾಸಮಾರಂಭಗಳನ್ನು ಮಾಡಿಸಿ ಆತನು ಉದಯಿಸಿದ ಕೂಡಲೆ ತನಗೆ ಬಹಳ ಧನವು ದೊರೆದದ್ದರಿಂದ ಆತನಿಗೆ ಧನ್ಯಕುಮಾರನೆಂದು ಹೆಸರಿಟ್ಟನು. ಆ ಕೂಸು ದಿನದಿನಕ್ಕೆ ಬಿದಿಗಿ ಚಂದ್ರನೋಪಾದಿಯಲ್ಲಿ ಸರ್ವ ವಿನಯಾದಿ ಸದ್ಗುಣಗಳಿಂದಲೂ ಯಾವತ್ತು ಕಲೆಗಳಿಂದಲೂ ಪರಿಪೂರ್ಣವಾಗಿ ಬೆಳೆಯುತ್ತ ನಡೆಯಿತು. ಮುಂದೆ ಅವನು ಏಳು ವರ್ಷದವನಾದ ಬಳಿಕ ಧನಪಾಲನು ಶಾಸ್ತ್ರಾಭ್ಯಾಸಕ್ಕೋಸ್ಕರ ಅವನನ್ನು ಒಬ್ಬ ಉತ್ತಮ ಜೈನಪಂಡಿತನ ಹತ್ತರ ಇಟ್ಟನು. ಧನ್ಯಕುಮಾರನು ಪುಣ್ಯವಂತನೂ, ಬುದ್ಧಿವಂತನೂ, ಇದ್ದದರಿಂದ ಆ ವಿದ್ವಾನ್ ಗುರುವಿನ ಕೈಯೊಳಗೆ ಸ್ವಲ್ಪ ದಿವಸದೊಳಗೆ ಸರ್ವಶಾಸ್ತ್ರ ಪಾರಂಗತನಾದನು.

ಧನ್ಯಕುಮಾರನು ಉದಯುವಾದಂದಿನಿಂದ ಅವರ ಮನೆಯ ಸೌಭಾಗ್ಯವು ಬೆಳೆಯುತ್ತಾ ನಡೆಯಿತು. ಆದ್ದರಿಂದ ಅವನ ಮನೆತನವು ಲೌಕಿಕದಲ್ಲಿ ಒಳ್ಳೇ ಪ್ರಸಿದ್ಧಿಗೆ ಬಂತು. ಆದಾಗ್ಯೂ, ಅವನು ತನುಮನಧನದಲ್ಲಿ ಯತ್ಕಿಂಚಿತ ಗರ್ವ ಲೋಭಾದಿಗಳನ್ನು ಮಾಡದೆ ಪ್ರತಿದಿವಸ ದೇವಪೂಜಾ ಮುಂತಾದ ಕ್ರಿಯೆಗಳನ್ನು ಮಾಡುವದರಲ್ಲಿ ಬಹಳ ಹಣವನ್ನು ವೆಚ್ಚಮಾಡಿದನು. ಇದನ್ನು ನೋಡಿ ಅವನ ಅಣ್ಣಂದಿರಾದ ದೇವಪಾಲ ಮುಂತಾದವರು ತಮ್ಮ ತಾಯಿಗೆ—“ ಏನೇ ಅವ್ವಾ, ನಾವು ಹಗಲಿರುಳು ಕಷ್ಟಪಟ್ಟು ದ್ರವ್ಯವನ್ನು ಸಂಪಾದಿಸಬೇಕು, ಇವನು ಮಾತ್ರ ಮನೆಯಲ್ಲಿ ಐಷಆರಾಮದಿಂದ ಕೂತು ನಿರರ್ಥಕವಾಗಿ ಹಣವನ್ನು ವೆಚ್ಚ ಮಾಡಬೇಕು. ಇದು ನಮಗೆ ಸರಿದೋರುವದಿಲ್ಲ ” ಅಂದರು. ಆಗ್ಗೆ ತಾಯಿಯಾದ ಪ್ರಭಾವತಿಯು “ ಮಕ್ಕಳಿರಾ, ಧನ್ಯಕುಮಾರನು ಒಳ್ಳೇ ಪುಣ್ಯವಂತನಾಗಿರುವನು. ಅವನ ಪುಣ್ಯದಿಂದಲೇ ನಮ್ಮ ಮನೆಯಲ್ಲಿ ಎಷ್ಟೋ ಹಣವು ಸಂಪಾದನೆಯಾಯಿತು. ಅವನ ಸಂಗಡ ನೀವು ನಿರರ್ಥಕ ಜಗಳಾಡ

ಬೇಡಿರಿ; ಎಂದು ಹೇಳಿದಳು. ಆಗ್ಗೆ ದೇವಪಾಲನು—ಧನ್ಯಕುಮಾರನು ಒಳ್ಳೇ ಪುಣ್ಯವಂತನಿದ್ದರೆ, ನಾವು ಸಂಪಾದಿಸುವಷ್ಟು ಹಣವನ್ನಾದರೂ ಸಂಪಾದಿಸಲಿ ನೋಡುವಾ! ಎಂದು ಅಂದನು. ಈ ಪ್ರಕಾರ ದೇವಪಾಲನು ಮಾತಾಡಿದ ಮಾತುಗಳನ್ನು ಕೇಳಿ ತಾಯಿಯಾದ ಪ್ರಭಾವತಿಯು ಆತನಿಗೆ ಮೊದಲಿನ ಯಾವತ್ತೂ ಸಂಗತಿಗಳನ್ನು ತಿಳಿಸಿದಳು. ಆಗ್ಗೆ ದೇವಪಾಲ ಮುಂತಾದ ಏಳು ಜನ ಅಣ್ಣಂದಿರನ್ನು ಸಮಾಧಾನಪಡಿಸುವದಕ್ಕೋಸ್ಕರ ಧನಪಾಲನು ಧನ್ಯಕುಮಾರನಿಗೆ ಕೆಲವು ಬಂಗಾರದ ನಾಣ್ಯಗಳನ್ನು ವ್ಯಾಪಾರದ ಬಂಡವಲಕ್ಕಾಗಿ ಕೊಟ್ಟು ಅವನನ್ನು ವ್ಯವಹಾರಕ್ಕೆ ಕಳುಹಿಕೊಟ್ಟನು. ಧನ್ಯಕುಮಾರನು ಆ ಬಂಗಾರದ ನಾಣ್ಯಗಳನ್ನು ಕೈಯಲ್ಲಿ ತಕ್ಕೊಂಡು—ಅಪ್ಪಾ ವ್ಯವಹಾರ ಅಂದರೇನು? ಮತ್ತು ಅದನ್ನು ಹ್ಯಾಗೆ ಮಾಡುತ್ತಾರೆ? ನನಗೆ ಗೊತ್ತಿಲ್ಲವೆಂದು ಹೇಳಿದನು. ಆಗ್ಗೆ ಧನಪಾಲನು ವ್ಯವಹಾರವೆಂದರೆ ಪೇಟೆಯೊಳಗೆ ಹೋಗಿ ಯಾವದಾದರೊಂದು ಜೀನಸು ತಕ್ಕೊಂಡು, ಅದನ್ನು ಪುನಃ ಮತ್ತೊಬ್ಬರಿಗೆ ಲಾಭ ತಕ್ಕೊಂಡು ಮಾರಾಟ ಮಾಡುವ ಕೆಲಸಕ್ಕೆ ವ್ಯವಹಾರವೆನ್ನುತ್ತಾರೆಂದನು. ತಂದೆಯ ಈ ಮಾತುಗಳನ್ನು ಕೇಳಿ ಧನ್ಯಕುಮಾರನು ಮೊದಲು ಪೇಟೆಗೆ ಹೋಗಿ ಕಟ್ಟಿಗೆಯಿಂದ ತುಂಬಿದ ಒಂದು ಚಕ್ಕಡಿಯನ್ನು ತನ್ನ ಕೈಯೊಳಗಿನ ಯಾವತ್ತು ಬಂಗಾರದ ನಾಣ್ಯಗಳನ್ನು ಕೊಟ್ಟು ಖರೇದಿ ಮಾಡಿದನು. ಪುನಃ ಆ ಗಾಡಿಯನ್ನು ಮಾರಿ ಒಂದು ಕೋಣವನ್ನು ಕೊಂಡನು. ಪುನಃ ಆ ಕೋಣವನ್ನು ಮಾರಿ ಒಂದು ಮುರಕ ಪಲ್ಲಂಗದ ನಾಲ್ಕು ಕಾಲುಗಳು ಚಂದವಾಗಿ ಕಂಡದ್ದರಿಂದ ಅವುಗಳನ್ನು ಕೊಂಡು, ತಕ್ಕೊಂಡು ಮನೆಗೆ ಊಟಕ್ಕೆ ಹೋದನು. ಇಷ್ಟರಲ್ಲಿ ತಾಯಿಯಾದ ಪ್ರಭಾವತಿಯು ತನ್ನ ಮಗನು ಇಂದಿನ ದಿವಸ ಹೊಸ ವ್ಯವಹಾರವನ್ನು ಮಾಡಿ ಬಂದಿರುವದನ್ನು ತನ್ನ ಉಳಿದ ಮಕ್ಕಳುಗಳಿಗೆ ತಿಳಿಸುವ ಸಲುವಾಗಿ ಹೊರಟು ಬರುವಷ್ಟರಲ್ಲಿ ದೇವಪಾಲ ಮುಂತಾದ ಅಣ್ಣಂದಿರು ತಮ್ಮ ಪ್ರತಿ ದಿವಸದ ವ್ಯವಹಾರ ಉದ್ದಿಮೆಗಳನ್ನು ತೀರಿಸಿ ಮನೆಗೆ ಬಂದು, ಧನ್ಯಕುಮಾರನು ಬಹಳ ಕ್ರಯಬಾಳುವ ಬಂಗಾರದ ನಾಣ್ಯಗಳನ್ನು ಕೊಟ್ಟು, ನಾಲ್ಕು ಮುರುಕ ಪಲ್ಲಂಗದ ಕಾಲುಗಳನ್ನು ತಂದಿರುವದನ್ನು ನೋಡಿ, ಅತಿ ಸಿಟ್ಟಿಗೆದ್ದು ನಿನ್ನ ಪುಣ್ಯವಂತ ಮಗನು

ಇಷ್ಟು ದ್ರವ್ಯ ಸಂಪಾದಿಸಿದ್ದಾನೆ? ಇಂಥ ಅಸಮಂಜಸ ವ್ಯವಹಾರವನ್ನು ಯಾವ ಮೂರ್ಖನೂ ಮಾಡಲಿಕ್ಕಿಲ್ಲವೆಂದು ಹೇಳಿದ್ದಲ್ಲದೆ, ಇಂಥ ಮೂರ್ಖನಾದ ಮಗನ ಮೇಲೆಯೇ ಅವ್ವನು ಇಷ್ಟು ಪ್ರೇಮವನ್ನು ಮಾಡುತ್ತಾಳೆ. ಇದು ಎಂಥ ಅನ್ಯಾಯವು? ಇದು ಯಾರ ತಪ್ಪು? ನಾವೇ ಹತಭಾಗ್ಯಶಾಲಿಗಳು ಅನ್ನುವದನ್ನು ಕೇಳಿ ಪ್ರಭಾವತಿಯು ಏನೂ ಮಾತಾಡದೆ ಸುಮ್ಮನೆ ನಿಂತಳು. ಆ ವೇಳೆಯಲ್ಲಿ ಆಕೆಯು ಯಾರಿಗೆ ಏನೂ ಅನ್ನಲಿಲ್ಲ. ಆ ಮೇಲೆ ಎಲ್ಲರಿಗೂ ಸ್ನಾನಾದಿಗಳನ್ನು ಮಾಡಿಸಿ, ಆಹಾರ ತಾಂಬೂಲಗಳು ತೀರಿದ ಮೇಲೆ ಧನ್ಯಕುಮಾರನು ತಂದ ನಾಲ್ಕೂ ಮುರಕ ಪಲ್ಲಂಗದ ಕಾಲುಗಳನ್ನು ತೊಳೆದು ಮುರಿಯಬೇಕೆಂದು ಅವುಗಳನ್ನು ಕಲ್ಲಮೇಲೆ ಅಪ್ಪಳಿಸಲು ಅದರೊಳಗಿಂದ ಚಿತ್ರವಿಚಿತ್ರವಾದ ಅನೇಕ ಅಮೌಲಿಕ ರತ್ನಗಳು ಭೂಮಿಯ ಮೇಲೆ ಬಿದ್ದವು. ಆ ರತ್ನಗಳಿಂದ ಮನೆಯ ತುಂಬಾ ಬೆಳಕು ಬಿದ್ದದರಿಂದ ಮನೆಗೆ ಒಂದು ತರದ ಶೋಭೆಯೇ ಬಂತು; ಮತ್ತು ಆ ರತ್ನಗಳ ಸಂಗಡ ಒಂದು ಸುವರ್ಣಪಟದ ಮೇಲೆ ಬರೆದ ಪತ್ರಿಕೆಯೂ ಇದ್ದು ಅದರಲ್ಲಿದ್ದದ್ದೇನಂದರೆ:—"ಹಿಂದಕ್ಕೆ ಇದೇ ಉಜ್ಜಯನೀ ಪಟ್ಟಣದಲ್ಲಿ ವಸುಪಾಲನೆಂಬವನೋರ್ವ ಸಾವುಕಾರನಿದ್ದನು. ಅವನ ಮನಸ್ಸಿಗೆ ಅಲ್ಹಾದವಾಗುವಂಥ ಏಳುಮಂದಿ ಮಕ್ಕಳಿದ್ದರು. ಆ ವಸುಪಾಲ ಸಾವುಕಾರನ ಪುಣ್ಯದಿಂದ ಆ ಮನೆಯಲ್ಲಿ ನವನಿಧಿ ದ್ರವ್ಯವು ಸಂಗ್ರಹವಾಗಿತ್ತು. ಮುಂದೆ ಒಂದಾನೊಂದು ದಿವಸ ಅವಧಿಜ್ಞಾನಿಯಾದ ಒಬ್ಬ ಜ್ಞಾನಸಾಗರ ಮುನಿಗಳ ದರ್ಶನವಾಗಲಾಗಿ ಆ ವಸುಪಾಲನು ಆ ಮುನಿವರ್ಯನಿಗೆ ನಮಸ್ಕಾರ ಮಾಡಿ, ಅವರಿಗೆ ಬಿನ್ನೈಕೆ ಮಾಡಿಕೊಂಡದ್ದೇನಂದರೆ, "ಮುನಿಶ್ರೇಷ್ಠರೇ ಮುಂದೆ ನನ್ನ ಈ ನವನಿಧಿ ಭಂಡಾರದ ಸೌಖ್ಯವನ್ನು ಯಾರು ಭೋಗಿಸುವರು" ಎಂದು ಪ್ರಶ್ನೆ ಮಾಡಲಾಗಿ ಮುನಿಪುಂಗವರು "ನೀನು ಸತ್ತು ಸ್ವರ್ಗವಾಸಿಯಾದ ಬಳಿಕ ಈ ನಿನ್ನ ಏಳುಮಂದಿ ಮಕ್ಕಳು ನಿನ್ನಹಿಂದೆ ಒಬ್ಬೊಬ್ಬರು ತೀವ್ರವಾಗಿ ಸಾಯುವರು. ಮುಂದೆ ಏಳನೇ ಮಗನು ಸತ್ತ ಬಳಿಕ ಅವನನ್ನು ಸ್ಮಶಾನ ಸ್ಥಳಕ್ಕೆ ಪಲ್ಲಂಗ ಸಹಿತವಾಗಿ ಒಯ್ಯುವರು, ಮತ್ತು ಪಲ್ಲಂಗವು ಅರ್ಧಮರ್ಧ ಸುಟ್ಟು ಅದರ ನಾಲ್ಕೂ ಕಾಲುಗಳು ಉಳಿಯುವವು. ಅವು ಮುಂದೆ ಕಾಲಾಂತರದಿಂದ ಧನಪಾಲ ಶ್ರೇಷ್ಠಿಯ ಮಗನಾದ

ಧನ್ಯಕುಮಾರನ ಕೈಯಲ್ಲಿ ವ್ಯವಹಾರ ನಿಮಿತ್ತವಾಗಿ ಸಿಗುವವು." ಈ ಪ್ರಕಾರವಾದ ಮುನಿಯ ವಾಕ್ಯಗಳನ್ನು ಕೇಳಿ ವಸುಪಾಲಶ್ರೇಷ್ಠನು ಈ ಪತ್ರವನ್ನು ಬರೆದನು:—ಅವನಿಪಾಲ ಅರಸನು ಈ ಪಟ್ಟಣವನ್ನು ಆಳುವಾಗ್ಗೆ ಅವನ ರಾಜ್ಯದಲ್ಲಿ ಉದಾರನೂ, ಭೋಗ್ಯಶಾಲಿಯೂ, ಒಳ್ಳೇ ದಾತೃತ್ವಶಕ್ತಿಯುಳ್ಳವನೂ, ಧನ್ಯನೂ ಮತ್ತು ವೈಶ್ಯಸತ್ಕುಲಂಕಾರಭೂತನೂ ಆಗುವ ಧನಪಾಲ ಸಾವುಕಾರನ ಮಗ ಧನ್ಯಕುಮಾರನು ಜನಿಸಿ ನನ್ನ ಈ ನವನಿಧಿ ದ್ರವ್ಯದ ಭೋಗವನ್ನು ಅನುಭವಿಸಲಿ " ಎಂದು ಇದ್ದ ಪತ್ರವನ್ನು ನೋಡಿ ಧನಪಾಲನು ಒಳ್ಳೇ ಆನಂದಭರಿತನಾದನು. ಆ ಮೇಲೆ ಧನಪಾಲನು ಅವನಿಪಾಲ ಅರಸನ ಕಡೆಗೆ ಹೋಗಿ ರಾಜೇಂದ್ರನೇ, ಈ ಪತ್ರದಲ್ಲಿ ನಮೂದಿಸಿದ ಮೇರೆಗೆ ವಸುಮಿತ್ರನ ವಾಡೆಯನ್ನು ಮತ್ತು ಅಲ್ಲಿರುವ ಅವನ ನವನಿಧಿ ದ್ರವ್ಯವನ್ನು ನನಗೆ ತಕ್ಕೊಳ್ಳಲಿಕ್ಕೆ ಅಪ್ಪಣೆ ಕೊಡು ಎಂಬದಾಗಿ ಕೇಳಿದನು. ರಾಜನು, ಧನ್ಯಕುಮಾರನ ಈ ಪುಣ್ಯದ ಪ್ರಭಾವನೆಯನ್ನು ನೋಡಿ ಬೆರಗಾಗಿ ಅದನ್ನು ತಕ್ಕೊಳ್ಳಲಿಕ್ಕೆ ಅಪ್ಪಣೆ ಕೊಟ್ಟನು. ಬಳಿಕ ಧನ್ಯಕುಮಾರನು ಯುಕ್ತಿಯಿಂದ ಆ ಮನೆಯಲ್ಲಿ ಹೂಳಿಟ್ಟಿದ್ದ ನವನಿಧಿಯನ್ನು ಶೋಧ ಹಚ್ಚಿ, ಅದನ್ನು ತಕ್ಕೊಂಡು ಒಳ್ಳೇ ಸೌಖ್ಯದಿಂದಿರಹತ್ತಿದನು. ಧನ್ಯಕುಮಾರನಿಗೆ ಈ ನವನಿಧಿ ಭಂಡಾರವು ಪೂರ್ವಪುಣ್ಯದಿಂದ ದೊರಕಿದ್ದರಿಂದ ನೀವೂ ಜಿನೇಂದ್ರ ಶ್ರೇಷ್ಠನಲ್ಲಿ ಭಕ್ತಿಯುಳ್ಳವರಾಗಿ ಪುಣ್ಯವನ್ನು ಸಂಪಾದಿಸರಿ.

ಈ ಪ್ರಕಾರ ಧನ್ಯಕುಮಾರನ ಚರಿತ್ರೆಯಲ್ಲಿಯ ಧನ್ಯಕುಮಾರನ ಜನ್ಮಚರಿತ್ರೆಯು ಮತ್ತು ನವನಿಧಿ ಭಂಡಾರದ ಸಂಪಾದನೆಯನ್ನೊಡಗೂಡಿದ ಮೊದಲನೇ ಪರಿಚ್ಛೇದವು ಸಮಾಪ್ತವು.

# ೨ನೆಯ ಪರಿಚ್ಛೇದವು.



ಈ ಪ್ರಕಾರ ಧನಪಾಲ ಸಾವುಕಾರನು ಸೌಖ್ಯದಿಂದಿರುತ್ತಿರಲು ಒಂದಾನೊಂದು ದಿವಸ ಧನಪಾಲನ ಜಾತಿಯ ಬೇರೊಬ್ಬ ಶ್ರೀಮಂತನು ಬಂದು ನನಗೆ ಗುಣಮಾಲಾ ಎಂಬುವಳೊಬ್ಬ ರೂಪವತಿ ಮಗಳಿದ್ದು ತಮ್ಮ ಮಗನಾದ ಧನ್ಯಕುಮಾರನಿಗೆ ಹೆಂಡತಿಯಾಗಲಿಕ್ಕೆ ಯೋಗ್ಯವಾದವಳೆಂದು ಆನಂದದಿಂದ ಹೇಳಿದನು. ಆದ್ದರಿಂದ ನಿಮ್ಮ ಮಗನಾದ ಧನ್ಯಕುಮಾರನಿಗೆ ಭೋಗ್ಯಸೌಖ್ಯವು ಸಿಗುವ ಸಲುವಾಗಿ ಆ ನನ್ನ ಮಗಳನ್ನು ಕೊಡುತ್ತೇನೆ. ಇದನ್ನು ಕೇಳಿ ಧನಪಾಲನು-ನನಗೆ ಧನ್ಯಕುಮಾರನ ಹೊರತಾಗಿ ಇನ್ನೂ ಏಳು ಮಂದಿ ಗಂಡು ಮಕ್ಕಳಿದ್ದು ಅವರ ಲಗ್ನವೂ ಇನ್ನೂ ಆಗಿರುವದಿಲ್ಲ. ಆದ್ದರಿಂದ ನಾನು ಈತನ ವಿವಾಹವನ್ನು ಈಗಲೇ ಮಾಡಲು ಉದ್ಯುಕ್ತನಾಗಿರುವದಿಲ್ಲವೆಂಬದಾಗಿ ಹೇಳಿದನು. ತಮ್ಮ ಇಚ್ಛೆ ಇದ್ದರೆ ನನ್ನ ಇತರ ಮಕ್ಕಳ ಪೈಕಿ ದೇವಪಾಲ, ಕನಕಪಾಲ ಮುಂತಾದವರಲ್ಲಿ ತಮಗೆ ಇಷ್ಟವಾದವರಿಗೆ ತಮ್ಮ ಮಗಳನ್ನು ಕೊಡಿರಿ ಅಂದನು. ಧನಪಾಲ ಸಾವುಕಾರನು ಅಂದ ಈ ಮಾತುಗಳನ್ನು ಕೇಳಿ ಆ ಸಾವುಕಾರನು-ನನ್ನ ಮಗಳನ್ನು ಧನ್ಯಕುಮಾರನ ಹೊರ್ತು ಬೇರೊಬ್ಬರಿಗೆ ಕೊಡುವದಿಲ್ಲವೆಂದು ಸ್ಪಷ್ಟವಾಗಿ ಹೇಳಿದನು. ಅದರಂತೆಯೇ ಪಟ್ಟಣದೊಳಗಿನ ಅನೇಕ ಜನ ಶ್ರೀಮಂತ ಮೊದಲಾದವರು ಧನ್ಯಕುಮಾರನಿಗೆ ತಮ್ಮ ಕನ್ಯೆಯನ್ನು ಕೊಡಲಿಕ್ಕೆ ನಾ ಮುಂದೆ ನೀ ಮುಂದೆ ಎಂದು ಬರಹತ್ತಿದರು. ಆದರೆ ಅವನ ಉಳಿದ ಏಳು ಮಂದಿ ಮಕ್ಕಳ ವಿಷಯವಾಗಿ ಏನೂ ಮಾತಾಡಲಿಲ್ಲ. ಹೀಗಾದದ್ದು ನೋಡಿ ಅವನ ಏಳು ಮಂದಿ ಅಣ್ಣತಮ್ಮಂದಿರು ಆಲೋಚಿಸಿದ್ದೇನಂದರೆ, ಧನ್ಯಕುಮಾರನು ಜೀವದಿಂದಿರುವವರೆಗೆ ನಮಗೆ ಸೌಖ್ಯವೂ, ಕೀರ್ತಿಯೂ, ಸಿಗಲಾರದು. ಆದ್ದರಿಂದ ಹ್ಯಾಗಾದರೂ ಮಾಡಿ ಅವನನ್ನು ಕೊಲ್ಲಬೇಕೆಂದು ಆಲೋಚಿಸಿ ಅವರು ತಮ್ಮ ತಮ್ಮನಾದ ಧನ್ಯಕುಮಾರನನ್ನು ಘೋರಾರಣ್ಯದಲ್ಲಿ ತಪಸ್ವಿಯಾದ

ಮತಿಸಾಗರ ಮುನಿಯುವರ ದರ್ಶನ ಮಾಡಿಕೊಂಡು ಬರುವ ನೆವ ಹೇಳಿ ಆತನಿಗೆ ಅರಣ್ಯಕ್ಕೆ ಕರದೊಯ್ದರು. ಧನ್ಯಕುಮಾರನು ಅಲ್ಲಿಗೆ ಹೋಗಿ ನೋಡುತ್ತಾನೆ, ಅಲ್ಲಿ ಮುನೀಶ್ವರರು ಇರುವದು ಒತ್ತಟ್ಟಿಗಿರಲಿ. ಒಂದು ಪಶುಪಕ್ಷಿಸಹಿತ ಇದ್ದಿದ್ದಿಲ್ಲ. ಆಗ್ಗೆ ಅವರು ಧನ್ಯಕುಮಾರನಿಗೆ-ಮುನೀಶ್ವರರು ಎಲ್ಲಿಯಾದರೂ ಹೊರಗೆ ಹೋಗಿರಬಹುದು ಎಂಬ ಸುಳ್ಳು ನೆವವನ್ನು ಹೇಳಿ ನಾವು ಇಲ್ಲೇ ಸಮೀಪದಲ್ಲಿರುವ ಮಾವಿನ ತೋಟದಲ್ಲಿರುವ ಭಾವಿಯೊಳಗೆ ಹೋಗಿ ಜಲಕ್ರೀಡಾ ಆಡಿಬರೋಣ ಬರ್ರಿ ಎಂದು ಹೊರಟರು. ಮತ್ತು ಭಾವಿಯಲ್ಲಿ ಮನಸ್ಸಿಗೆ ಬಂದಂತೆ ಕ್ರೀಡಾ ತೀರಿಸಿಕೊಂಡರು. ಆದರೆ ಈ ಪಾಪ ಕೃತ್ಯವು ಧನ್ಯಕುಮಾರನಿಗೆ ಸೇರಲಿಲ್ಲವಾದ್ದರಿಂದ ಅವನು ಅವರು ಆಡುವದನ್ನು ನೋಡುತ್ತ ಭಾವಿಯ ದಂಡೆಯ ಮೇಲೆ ಕುಳಿತನು. ಇದನ್ನು ನೋಡಿ ಆ ಅಣ್ಣಂದಿರು ಏನೋ ಧನ್ಯಕುಮಾರನೇ ನೀನು ಇಂದಿನ ದಿವಸ ನಮ್ಮ ಕೂಡ ಯಾಕೆ ಆಡಲಿಕ್ಕೆ ಬರುವದಿಲ್ಲ? ಎಂದು ಕೇಳಿದರು. ಅದಕ್ಕೆ ಧನ್ಯಕುಮಾರನು—ಸೋಸದೆ ಇದ್ದಂಥಾ ನೀರನ್ನು ಮುಟ್ಟುವದು ನಮ್ಮ ಜೈನ ಧರ್ಮದವರಿಗೆ ಪಾಪದ ಕೆಲಸವು, ಆದರಿಂದ ಬಹಳ ಜಂತುಗಳ ನಾಶವಾಗುತ್ತದೆ. ಆದ್ದರಿಂದ ಇಲ್ಲಿ ಕ್ರೀಡೆಯಾಡುವದು ನನ್ನ ಮನಸ್ಸಿಗೆ ಬರುವದಿಲ್ಲ. ಹೀಗೆ ಅನ್ನ ಅನ್ನುವಷ್ಟರಲ್ಲಿ ಆ ಎಲ್ಲ ಅಣ್ಣಂದಿರು ಮೇಲಕ್ಕೆ ಏರಿಬಂದು ಅವನನ್ನು ಭಾವಿಯಲ್ಲಿ ಎತ್ತಿ ಚಲ್ಲಿ ಮೇಲಿನಿಂದ ಅವನ ಮೇಲೆ ಕಲ್ಲಿನ ಮಳೆಯನ್ನು ಸುರಿಯಹತ್ತಿ ಅವನು ಸತ್ತನೆಂದು ಭಾವಿಸಿಕೊಂಡು ಮನೆಗೆ ಅತಿ ಆನಂದದಿಂದ ಬಂದರು. ಮನೆಗೆ ಬಂದ ಬಳಿಕ ತಾಯಿಯಾದ ಪ್ರಭಾವತಿಯು ಮಕ್ಕಳುಗಳಿರಾ, ತಮ್ಮನಾದ ಧನ್ಯಕುಮಾರನನ್ನು ಎಲ್ಲಿ ಬಿಟ್ಟು ಬಂದಿರಿ? ಎಂಬುದಾಗಿ ಕೇಳಿದಳು. ಅದಕ್ಕೆ ಅವರು ಅವನು ಎಲ್ಲಿರುವನೆಂಬುವದು ನಮಗೆ ಗೊತ್ತಿಲ್ಲವೆಂಬದಾಗಿ ಹೇಳಿದರು ಈ ಪ್ರಕಾರ ನುಡಿದ ಮಕ್ಕಳ ಮಾತುಗಳನ್ನು ಕೇಳಿ, ಪ್ರಭಾವತಿಯೂ, ಧನಪಾಲನೂ, ಅತಿ ದುಃಖಿತರಾಗಿ ಮಗನ ಶೋಧವನ್ನು ಮಾಡಹತ್ತಿದರು. ಎಷ್ಟು ಹುಡುಕಿದರೂ ಮಗನ ಗೊತ್ತು ಹತ್ತಲಿಲ್ಲ. ಇಷ್ಟಾಗಿ ಕೆಲವು ದಿವಸಗಳು ಸಂದಿಹೋದವು. ಮನೆಯಲ್ಲಿದ್ದ ನವನಿಧಿ ಭಂಡಾರದ ಅಂತರ್ಯಾಮಿ ಕಾವುಲಗಾರನಾದ ಯಕ್ಷದೇವನು

ಪ್ರತ್ಯಕ್ಷನಾಗಿ, ಧನಪಾಲನಿಗೂ ಮತ್ತು ಅವನ ಕುಟುಂಬದೊಳಗಿನ ಯಾವತ್ತು ಜನರಿಗೂ ಅತಿತ್ರಾಸಕೊಟ್ಟು ನೀವು ಇಲ್ಲಿ ವಾಸಿಸಲಿಕ್ಕೆ ಯೋಗ್ಯರಲ್ಲ, ನೀವು ಈಗಿಂದಿಗಲೇ ಈ ಸ್ಥಾನಬಿಟ್ಟು ನಿಮ್ಮ ಮೊದಲಿನ ಮನೆಗೆ ಹೋಗಿರಿ ಎಂದು ಹೇಳಿ ಆ ಯಕ್ಷನು ಅವರನ್ನು ಆ ವಸುಮಿತ್ರನ ಭವ್ಯವಾದ ವಾಡೆ (ಮನೆ) ಯೊಳಗಿಂದ ಹೊರಗೆ ಹಾಕಿದನು. ಆಗ್ಗೆ ಧನ್ಯಕುಮಾರನ ವಿಯೋಗ ದುಃಖವಾಗಿ ಎಲ್ಲರೂ ಆ ಅರಮನೆಯನ್ನು ಬಿಟ್ಟು ತಮ್ಮ ಪೂರ್ವದ ಮುರಕ ಮನೆಗೆ ಬಂದರು.

ಹಿಂದೆ ಭಾವಿಯೊಳಗೆ ಬಿದ್ದಂಥಾ ಧನ್ಯಕುಮಾರನು ಘಾಬರಿಯಾಗಿದ್ದರೂ ಅಂಜದೆ ಶಾಂತಮನಸ್ಸಿನಿಂದ ಣಮೋಕಾರ ಮಂತ್ರವನ್ನು ಪಠಣ ಮಾಡುತ್ತಿದ್ದನು; ಮತ್ತು ವೀತರಾಗ ಜಿನೇಶ್ವರನ ಮೇಲೆ ಭಕ್ತಿ ಇಟ್ಟಿದ್ದರಿಂದ ಅವರು ಹೊಡೆದಂಥ ಕಲ್ಲುಗಳ ಪೆಟ್ಟು ಮಲ್ಲಿಗೆ ಹೂವಿನ ಪೆಟ್ಟಿನಂತಾಗಿ ಸ್ವರ್ಗದೊಳಗಿನ ದೇವತೆಗಳು ಪ್ರತ್ಯಕ್ಷರಾಗಿ ಅವನನ್ನು ಆ ಸಂಕಟದೊಳಗಿಂದ ಪಾರು ಮಾಡಿದರು. ನೋಡಿರಿ! ಏಕಧ್ಯಾನ ಚಿತ್ತದ ಪ್ರಭಾವವು ಹ್ಯಾಗದೆ? ಣಮೋಕಾರ ಮಂತ್ರದ ಪ್ರಭಾವವನ್ನು ನೋಡಿರಿ. ಈ ಮಂತ್ರಪ್ರಭಾವನೆಯಿಂದ ಸ್ವರ್ಗದೊಳಗಿನ ದೇವರು ಸಹ ಇಹಲೋಕದೊಳಗಿನ ಜನರಿಗೆ ದಾಸಾನುದಾಸರಾಗಿ ಸಹಾಯವನ್ನು ಮಾಡುತ್ತಾರೆ. ಆದ್ದರಿಂದ ಸಂಸಾರಿಕ ಸಮುದ್ರದಲ್ಲಿ ಮುಳುಗಿ ತೇಲಾಡುವಂಥ ಜನರೇ ನೀವು ಣಮೋಕಾರ ಮಂತ್ರವನ್ನು ನಿಮ್ಮ ಹಡಗವನ್ನಾಗಿ ಮಾಡಿರಿ. ಅಂದರೆ ನಿಮಗೆ ಬರತಕ್ಕ ಅನಂತ ದುಃಖಗಳೆಲ್ಲ ನಾಶಹೊಂದಿ ಮೋಕ್ಷ ಪದವಿಯನ್ನು ಪಡೆದು ಸುಖದಿಂದಿರುವಿರಿ.

ದೇವರು ಆ ಸಂಕಟದೊಳಗಿಂದ ಪಾರು ಮಾಡಿದ ಬಳಿಕ ಧನ್ಯಕುಮಾರನು ಆ ದುಷ್ಟ ಅಣ್ಣಂದಿರಿಗೆ ಅಂಜಿ ಮನೆಯ ಮಾರ್ಗ ಹಿಡಿಯದೆ ರಾಜಗೃಹ ಪಟ್ಟಣದ ದಾರೀ ಹಿಡಿದನು. ಅದೇ ದಾರೀ ಹಿಡಿದು ಕೆಲವು ಹರದಾರೀ ನಡೆದ ಬಳಿಕ ದಾರಿಯಲ್ಲಿ ಒಬ್ಬ ಒಕ್ಕಲಿಗನು ತನ್ನ ಹೊಲದಲ್ಲಿ ರೆಂಟೆ ಹೊಡೆಯುತ್ತಿದ್ದನು. ಅದನ್ನು ನೋಡಲಿಕ್ಕೆ ಅವನು ಅಲ್ಲಿ ಹೋಗಿ ನಿಲ್ಲಲು ಇವನ ರೂಪಾತಿಶಯವನ್ನು ಆ ಒಕ್ಕಲಿಗನು ನೋಡಿ ಬೆರಗಾಗಿ

ನಾನು ಜೈನಧರ್ಮದ ಶ್ರಾವಕನಿದ್ದೇನೆ. ನೀನು ಅತಿಶಯವಾಗಿ ಹಸಿದಂತೆ ಕಾಣುತ್ತಿರುವಿ. ನನ್ನಲ್ಲಿ ಊಟಕ್ಕೆ ಏನೂ ಅಡ್ಡಿಯಿಲ್ಲ. ಅಗತ್ಯವಾಗಿ ಊಟ ಮಾಡಬೇಕು. ಎಂಬದಾಗಿ ಹೇಳಿದನು. ಅದಕ್ಕೆ ಧನ್ಯಕುಮಾರನು ಒಪ್ಪಿದ್ದರಿಂದ ಆ ಒಕ್ಕಲಿಗನು ಎಲೆಯನ್ನು ತರುವ ಸಲುವಾಗಿ ಧನ್ಯಕುಮಾರನನ್ನು ತನ್ನ ರೆಂಟೆಯ ಹತ್ತರ ಕೂಡ್ರಿಸಿ ಹೋದನು.

ಆ ಒಕ್ಕಲಿಗನು ಎಲೆಯನ್ನು ತರಲಿಕ್ಕೆ ಹೋದಾಗ ಧನ್ಯಕುಮಾರನಿಗೆ ರೆಂಟೆಹೊಡೆಯುವದು ಒಂದು ಸೋಜಿಗವೆಂದು ತಿಳಿದು ತಾನೂ ರೆಂಟೆ ಹೊಡೆಯ ಹತ್ತಿದನು. ಅಗ್ಗೆ ಅವನ ಪುಣ್ಯಪ್ರಭಾವನೆಯಿಂದ ಬಂಗಾರದ ನಾಣ್ಯಗಳಿಂದ ತುಂಬಿದ್ದೊಂದು ಕೊಡವು ಆ ರೆಂಟೆಯ ತುದಿಗೆ ಹತ್ತಿ ಅವನ ದೃಷ್ಟಿಗೆ ಬಿತ್ತು. ಅದನ್ನು ನೋಡಿ ಧನ್ಯಕುಮಾರನು ಚಕಿತನಾಗಿ ರೆಂಟೆ ಹೊಡೆಯುವದನ್ನು ಬಿಟ್ಟು ಸ್ವಲ್ಪ ಅಂತರದ ಮೇಲೆ ಸುಮ್ಮನೇ ಕುಳಿತನು. ಒಕ್ಕಲಿಗನು ಎಲೆಗಳನ್ನು ತಂದಮೇಲೆ ಇಬ್ಬರೂ ಸಂತೋಷದಿಂದ ಹೊಟ್ಟೆತುಂಬಾ ಊಟ ಮಾಡಿದರು. ಆ ಮೇಲೆ ಧನ್ಯಕುಮಾರನು ರಾಜಗೃಹದ ರಸ್ತೆಯನ್ನು ಕೇಳಿ ಆ ದಾರೀ ಹಿಡಿದು ನಡೆಯಹತ್ತಿದನು. ಒಕ್ಕಲಿಗನು ತನ್ನ ಕೆಲಸವನ್ನು ಪುನಃ ಪ್ರಾರಂಭಿಸಿದನು. ಅಷ್ಟರಲ್ಲಿ ಕೂಡಲೇ ಧನ್ಯಕುಮಾರನು ಕಯ್ಯಿಂದ ಮುಚ್ಚಿದ ಆ ದ್ರವ್ಯತುಂಬಿದ ಕೊಡವು ಬೈಲಿಗೆ ಬೀಳಲಾಗಿ ಆ ಒಕ್ಕಲಿಗನು ಚಕಿತನಾಗಿ ಓಡುತ್ತೋಡುತ್ತ ಧನ ಕುಮಾರನ ಹತ್ತರ ಬಂದು ಮಿತ್ರನೇ ನೀನು ದ್ರವ್ಯದ ಮೇಲೆ ಇಷ್ಟು ನಿರಾಶೆಯುಳ್ಳವನಾಗಿ ಯಾಕೆ ಹೋಗುತ್ತಿದ್ದೀ ? ಇದನ್ನು ಕೇಳಿ ಧನ್ಯಕುಮಾರನು ಆ ದ್ರವ್ಯವು ನಿನ್ನ ಹೊಲದಲ್ಲಿಯೇ ಸಿಕ್ಕಿರುವದರಿಂದ ಅದು ನನ್ನದಲ್ಲ ನಿನ್ನದು ಎಂದು ಹೇಳಿದನು.

ಈ ತರದ ಧನ್ಯಕಮಾರನ ಮಾತುಗಳನ್ನು ಕೇಳಿ ಆ ಒಕ್ಕಲಿಗನು ಮಿತ್ರನೇ ಇಷ್ಟು ವರ್ಷಗಳ ವರೆಗೆ ಈ ಭೂಮಿಯ ಸಾಗುವಳಿಯನ್ನು ನಾವು ಮಾಡುತ್ತಿದ್ದು ನಮಗೆ ಏನೂ ದೃಗ್ಗೋಚರವಾಗಿಲ್ಲ. ಆದರೆ ನೀನು ಇಂದಿನ ದಿವಸ ರೆಂಟೆ ಹೊಡೆಯುವ ಚಮತ್ಕಾರವನ್ನು ನೋಡುವ ಇಚ್ಛೆಯಿಂದ ಒಂದೆರಡು ಸಾಲು ಹೊಡೆಯುವಷ್ಟರಲ್ಲಿ ಈ ದ್ರವ್ಯ ತುಂಬಿದ

ಕೊಡುವು ಸಿಕ್ಕಿದ್ದು ನಿನ್ನ ಪುಣ್ಯಬಲದಿಂದ ಹೊರ್ತು ನಮ್ಮಿಂದಲ್ಲ; ಆದ್ದರಿಂದ ನೀನೇ ಈ ದ್ರವ್ಯಕ್ಕೆ ಒಡೆಯನಿರುವಿ. ಕಾರಣ ಈ ದ್ರವ್ಯವನ್ನು ನೀನೇ ತಕ್ಕೊಂಡು ಹೋಗಬೇಕು ನಮ್ಮಂಥ ದುರ್ದೈವಿಗಳಿಗೆ ಈ ತರದ ಸಂಪತ್ತಿಯು ಎಲ್ಲಿಂದ ಪ್ರಾಪ್ತವಾದೀತು ಎಂದು ಹೇಳಿದನು.

ಈ ಮಾತುಗಳನ್ನು ಕೇಳಿ ಧನ್ಯಕುಮಾರನು-ಒಳ್ಳೇದು ಈ ದ್ರವ್ಯವು ನನ್ನದೇ ಯಾಕಾಗಲೊಲ್ಲದು; ನಿನ್ನ ದಾರಿದ್ರ್ಯವನ್ನು ದೂರ ಮಾಡುವದಕ್ಕೋಸ್ಕರ ನಾನು ಸಂತೋಷದಿಂದ ನಿನಗೆ ಇನಾವಾಗಿ ಕೊಡುತ್ತೇನೆ. ತಕ್ಕೊಳ್ಳಬೇಕು ಎಂಬದಾಗಿ ಹೇಳಿದನು. ಈ ಪ್ರಕಾರ ದ್ರವ್ಯದ ಮೇಲೆ ನಿರ್ಲೋಭಿಯಾದ ಧನ್ಯಕುಮಾರನ ಮಾತುಗಳಿಗೆ ಒಪ್ಪಿ ಆತನಿಗೆ ಮೂರಾವರ್ತಿ ನಮಸ್ಕಾರ ಮಾಡಿ ತನ್ನ ಹೊಲಕ್ಕೆ ತಿರುಗಿ ಬಂದನು. ಮತ್ತು ಧನ್ಯಕಮಾರನ ಉಪಕಾರವನ್ನು ಸ್ಮರಿಸಿ ಆ ದ್ರವ್ಯದ ಉಪಭೋಗವನ್ನು ಮಾಡುತ್ತ ಹೋದನು. ಇತ್ತ ಧನ್ಯಕುಮಾರನು ಪೂರ್ವದಂತೆ ರಾಜಗೃಹದ ಮಾರ್ಗವನ್ನು ಹಿಡಿದು ಸ್ವಲ್ಪ ದಾರೀ ನಡೆಯುತ್ತಿರಲಾಗಿ ಒಂದು ಸುಂದರವಾದ ಉಪವನವು ದೃಷ್ಟಿಗೆ ಬಿತ್ತು. ಆ ಸುಂದರವಾದ ವನದ ಅಶೋಕವೃಕ್ಷದ ಕೆಳಗೆ ಅವಧಿಜ್ಞಾನಿಯಾದ ಧರ್ಮಸಾಗರ ಎಂಬೋರ್ವ ಮುನಿಶ್ರೇಷ್ಠರು ತಪಮಾಡುತ್ತ ಕುಳಿತಿರುವದನ್ನು ಕಂಡು ಅವರ ದರ್ಶನ ಲಾಭವನ್ನು ತೆಗೆದುಕೊಳ್ಳುವಗೋಸ್ಕರ ಅಲ್ಲಿಗೆ ಹೋಗಿ ತ್ರಿಕರಣ ಶುದ್ಧಿಯಿಂದ ಅವರಿಗೆ ವಂದಿಸಿ ಅವರಿಂದ ಧರ್ಮೋಪದೇಶ ಕೇಳುವ ಸಲುವಾಗಿ ಅವರ ಹತ್ತರ ಕುಳಿತುಕೊಂಡನು. ಮುನಿವರ್ಯರು ಅವನಿಗೆ ಶ್ರಾವಕ ಧರ್ಮದ ಉಪದೇಶವನ್ನು ಮಾಡಿದ ಬಳಿಕ ಧನ್ಯಕುಮಾರನು ತನಗೆ ಯೋಗ್ಯವಾದ ಕೆಲವು ವ್ರತಗಳನ್ನು ಮುನೀಶ್ವರರಿಂದ ತೆಗೆದುಕೊಂಡನು. ಪುನಃ ಮುನೀಶ್ವರರಿಗೆ ವಂದಿಸಿ ಮುನಿವರ್ಯರೇ ನನ್ನ ತಾಯಿ ತಂದೆಗಳು ನನಗೆ ಅತಿಶಯ ಪ್ರೀತಿಮಾಡುತ್ತಾರೆ. ಆದರೆ ನನ್ನ ಬಾಂಧವರು ಮಾತ್ರ ನನ್ನ ಮೇಲೆ ಬಹಳೇ ಮತ್ಸರ ಮಾಡುತ್ತಾರೆ. ಮತ್ತು ನನಗೆ ಹಗಲೆಲ್ಲ ದ್ರವ್ಯದ ನಿಧಿಗಳು ದೊರಕುತ್ತವೆ. ಇದರ ಕಾರಣವೇನಿರಬಹುದೆಂಬದನ್ನು ದಯವಿಟ್ಟು ಹೇಳಿರಿ ಎಂಬದಾಗಿ ಬಿನ್ನವಿಸಿದನು. ಆಗ್ಗೆ

ಆ ಮುನಿಯು ಅವಧಿಜ್ಞಾನಿಯಾದ್ದರಿಂದ ಅವನ ಭವಾಂತರ ( ಹಿಂದಿನ ಜನ್ಮದ ಚರಿತ್ರ ) ವನ್ನು ಹೇಳಲಾರಂಭಿಸಿದರು.

ಧನ್ಯಕುಮಾರನ ಪೂರ್ವಭವದ ಚರಿತ್ರೆಯನ್ನು ಹೇಳುತ್ತಾರೆ. ಈ ಭರತಕ್ಷೇತ್ರದ ಮಗಧದೇಶದಲ್ಲಿ ಭೋಗವತಿ ಎಂಬದೊಂದು ಶಹರವದೆ. ಅಲ್ಲಿ ಕಾಮವೃಷ್ಟಿ ಎಂಬವನೊಬ್ಬ ಗ್ರಾಮಾಧಿಕಾರಿಯು ಇರುತ್ತಿದ್ದನು. ಆತನಿಗೆ ವೃಷ್ಟದಾನಾ ಎಂಬೋರ್ವ ಮಡದಿ ಇದ್ದಳು. ಅವರ ಮನೆಯಲ್ಲಿ ಸುಕೃತಪುಣ್ಯನೆಂಬುವದೊಬ್ಬ ಮನುಷ್ಯನು ಅವರ ಸೇವೆ ಮಾಡಲಿಕ್ಕೆ ಚಾಕರನಾಗಿ ನಿಂತಿದ್ದನು. ಮುಂದೆ ಆ ಗ್ರಾಮಾಧಿಕಾರಿಯ ಹೆಂಡತಿಯು ಗರ್ಭವತಿಯಾದಳು. ಆ ಗರ್ಭವು ದುಷ್ಟ ವೇಳೆಯಲ್ಲಾದ್ದರಿಂದ ಆಕೆಯ ಗಂಡನು ತೀವ್ರ ಮೃತಪಟ್ಟನು. ಅವನ ಹೆಂಡತಿಗೆ ನವಮಾಸವು ತುಂಬಲು ಆಕೆಯು ಒಂದು ಗಂಡುಮಗನನ್ನು ಹೆತ್ತಳು. ಹುಡುಗನು ಜನಿಸಿದಂದಿನಿಂದ ಅವರ ಮನೆಯ ಸಂಪತ್ತೆಲ್ಲ ನಾಶವಾಗಲಾಗಿ ಅವನು ಸಿರ್ಭಾಗ್ಯನೆಂದು ತಿಳಿದು ಆ ಕೂಸಿಗೆ ಅಕೃತಪುಣ್ಯನೆಂದು ಹೆಸರಿಟ್ಟರು. ಕಾಮವೃಷ್ಟಿ ಗ್ರಾಮಪತಿಯು ತೀರಿದ ಮೇಲೆ ಅವನ ಚಾಕರನಾದ ಸುಕೃತಪುಣ್ಯನಿಗೆ ಆ ಗ್ರಾಮದ ದೊರೆತನವು ಸಿಕ್ಕಿತು. ವೃಷ್ಟದಾನಾ ಮತ್ತು ಅಕೃತಪುಣ್ಯನು ಬೇರೆ ಒಬ್ಬ ಶ್ರೀಮಂತನ ಆಶ್ರಯಕ್ಕೆ ಹೋಗಿ ನಿಂತರು. ಈ ತರದ ಅಕೃತಪುಣ್ಯನ ಚರಿತ್ರೆಯನ್ನು ಕೇಳಿ ಧನ್ಯಕುಮಾರನು ನಡುವೇ ಸ್ವಲ್ಪ ತಡೆದು ನಮ್ರತನದಿಂದ ಆ ಅಕೃತಪುಣ್ಯನು ಪೂರ್ವಜನ್ಮದಲ್ಲಿ ಯಾರು ಇದ್ದರು, ಅವನು ಏನು ಪಾಪದ ಕೆಲಸವನ್ನು ಮಾಡಿದ್ದನು. ಇದನ್ನು ಹೇಳಬೇಕು. ಎಂದು ವಿನಂತಿ ಮಾಡಿದನು. ಇದನ್ನು ಕೇಳಿ ಮುನೀಶ್ವರರು ಅಕೃತಪುಣ್ಯನ ಪೂರ್ವದ ಭವವನ್ನು ಹೇಳತೊಡಗಿದರು.

ಹಿಂದಕ್ಕೆ ಭೂಮಿತಿಲಕವೆಂಬ ನಗರದಲ್ಲಿ ಧನಪತಿ ಎಂಬುವನೊಬ್ಬ ಸಾವುಕಾರನಿದ್ದನು. ಅವನು ಜೈನಧರ್ಮದವನಿದ್ದು ಅವನು ದೇವ, ಗುರು ಮತ್ತು ಶಾಸ್ತ್ರದಲ್ಲಿ ಒಳ್ಳೇ ಭಕ್ತಿವಂತನಿದ್ದನು ಅವನು ಒಳ್ಳೇ ಶ್ರದ್ಧೆಯುಳ್ಳವನಿದ್ದದರಿಂದ ಹೇರಳ ದ್ರವ್ಯವನ್ನು ವೆಚ್ಚಮಾಡಿ ಒಂದು ಉತ್ತಮವಾದ ಜಿನಮಂದಿರವನ್ನು ಕಟ್ಟಿಸಿ, ವಜ್ರ-ವೈಢೂರ್ಯ-ಮಾಣಿಕದಿಂದ,

ಕೆಚ್ಚಿದ ಒಂದು ಬಂಗಾರದ ಜಿನಬಿಂಬವನ್ನು ಅದರಲ್ಲಿ ಸ್ಥಾಪನೆ ಮಾಡಿದನು. ಮುಂದೆ ಕೆಲವು ದಿವಸಗಳಾದ ಬಳಿಕ ಧನಪತಿ ಸಾವುಕಾರನು ವ್ಯಾಪಾರ ನಿಮಿತ್ಯದಿಂದ ದೇಶಕ್ಕೆ ಹೋದನು. ತಾನು ವ್ಯಾಪಾರವನ್ನು ತೀರಿಸಿಕೊಂಡು ಬರುವವರೆಗೆ ಆ ಜಿನಮಂದಿರದ ಪೂಜೆ ಪುನಸ್ಕಾರ ಮುಂತಾದ ವಿನಿಯೋಗಗಳು ಉತ್ತಮ ರೀತಿ ಸಾಂಗವಾಗಲೆಂದು ತಿಳಿದು ಪರದೇಶಸ್ಥನಾದರೂ ತನ್ನ ಪ್ರೀತಿಯುವನಾದ ರುದ್ರದತ್ತನೆಂಬುವನಿಗೆ ಆ ಮಂದಿರದ ಕೆಲಸವನ್ನು ಒಪ್ಪಿಸಿ ಹೋದನು. ಆದರೆ ರುದ್ರದತ್ತನು ಮಹಾ ಪಾಪಿಷ್ಠನು ಮತ್ತು ಸಪ್ತ ವ್ಯಸನವುಳ್ಳವನೂ ಆಗಿದ್ದನು. ಆದರೆ ಅವನು ಪೂರ್ವದಲ್ಲಿ ಕಾಶಿಗೆ ಹೋಗಿ ಬ್ರಹ್ಮಚರ್ಯ ವ್ರತವನ್ನು ತಕ್ಕೊಂಡು ಅದನ್ನು ಭಂಗಮಾಡಿ ಪ್ರಪಂಚದಲ್ಲಿ ಅನೇಕ ಪಾಪದ ಕೆಲಸಗಳನ್ನು ಮಾಡಿದ್ದು ಧನಪತಿ ಸಾವುಕಾರನಿಗೆ ಗೊತ್ತಿದ್ದಿಲ್ಲ ಇದು ಅಲ್ಲದೆ ಇದೇ ರುದ್ರದತ್ತನು ಅದೇ ಜಿನಮಂದಿರದಲ್ಲಿಯ ಸುವರ್ಣ ಪಾತ್ರೆ ಮುಂತಾದ ವುಗಳನ್ನು ಮಾರಿ, ವೇಶ್ಯಾಸಂಗದಲ್ಲಿಯೂ, ಮದ್ಯ ಕುಡಿಯುವದರ ಲ್ಲಿಯೂ, ಅಭಕ್ಷ್ಯಭಕ್ಷ್ಯ ಮಾಂಸ ತಿನ್ನುವದು ಮುಂತಾದ ಅನೇಕ ಪಾಪದ ಕೆಲಸಗಳನ್ನು ಮಾಡಿದ್ದನು. ಈ ಪಾಪದ ಪ್ರಾಯಶ್ಚಿತ್ತದ ಸಲು ವಾಗಿ ಅವನಿಗೆ ಅತಿ ಭಯಂಕರವಾದ ಕುಷ್ಟರೋಗವು ಇದೇ ಜನ್ಮದಲ್ಲಿ ಉದ್ಭವಿಸಿತು. ಈ ರೋಗದ ಅನೇಕ ಕಷ್ಟಗಳನ್ನು ಸೋಸಿ ರುದ್ರಧ್ಯಾನ ದಿಂದ ಮರಣಹೊಂದಿ ಅತಿ ಕಷ್ಟಕರವಾದ ಸಂಕಟದ ನಿಧಿಯೇ ಆದಂಥ ಏಳನೇ ನರಕವಾಸಿಯಾದನು. ಅಲ್ಲಿ ಅವನು ಮೂವತ್ತು ಮೂರುಸಾವಿರ ವರ್ಷದವರೆಗೆ ಕಿವಿಯಿಂದ ಕೇಳಲಿಕ್ಕೂ, ಬಾಯಿಂದ ಮಾತಾಡಲಿಕ್ಕೂ, ಅಸಹ್ಯಕರವಾದಂಥ ನಾನಾತರದ ಸಂಕಟಗಳನ್ನು ಸೋಸಿ ಕಡೆಗೆ ಸ್ವಯಂಭುರಮಣವೆಂಬ ಒಂದು ಸಮುದ್ರದಲ್ಲಿ ದೊಡ್ಡ ಮೀನವಾಗಿ ಉದ್ಭವಿಸಿದನು. ಅಲ್ಲಿಯೂ ಅತ್ಯಂತ ಪಾಪವನ್ನು ಮಾಡಿ ಪುನಃ ಏಳನೇ ನರಕ ವಾಸಿಯಾದನು. ಮತ್ತು ಅಲ್ಲಿ ಮೂವತ್ತುಮೂರು ಸಾವಿರ ವರ್ಷ ಅನೇಕ ಕಷ್ಟಗಳನ್ನು ಸೋಸಿ ಮೇಲಕ್ಕೆ ಬಂದನು. ಆ ಬಳಿಕ ನಾನಾಪ್ರಕಾರದ ತಸಸ್ಥಾವರ ನಾಯಿ, ನರಿ, ಹಂದಿ, ಮೊದಲಾದ ಕುಷ್ಟಪ್ರಾಣಿ ಮುಂತಾದವುಗಳಲ್ಲಿ ಜನ್ಮ ಹೊಂದಿ ಕಷ್ಟಸೋಸಿ ಕಡೆಗೆ ಅಕೃತಪುಣ್ಯನಾಗಿ

ಮನುಷ್ಯಜನ್ಮಕ್ಕೆ ಬಂದನು. ಈ ಪ್ರಕಾರ ಅಕೃತಪುಣ್ಯನ ಪೂರ್ವಭವದ ವೃತ್ತಾಂತವು ಇರುವದೆಂಬದಾಗಿ ಹೇಳಿದರು, ಈ ಮೇರೆಗೆ ಯಾವನು ದೇವರ ದ್ರವ್ಯವನ್ನು ತುಡುಗು ಮಾಡುವನೋ ವೇಶ್ಯಾಸಂಗ, ರಾತ್ರಿ ಭೋಜನ, ಅಸತ್ಯಭಾಷಣ, ಪರಸ್ತ್ರೀಸೇವೆ, ಪರನಿಂದೆ ಆತ್ಮಪ್ರಶಂಶೆ, ಮುನಿ ನಿಂದೆ, ಗುರುದ್ರೋಹ ಇತ್ಯಾದಿ ಪಾಪದ ಕೆಲಸಗಳನ್ನು ಮಾಡುವನೋ ಅವನು ಅಕೃತಪುಣ್ಯನಂತೆ ಅತಿಶಯ ಸಂಕಟವನ್ನು ಸೋಸಿ ದುಃಖವೆಂಬ ಸಾಗರದಲ್ಲಿ ಮುಳುಗಿ ಹೋಗುವನು. ಈ ಸಂಗತಿಯ ಕಡೆಗೆ ಎಲ್ಲರೂ ಲಕ್ಷಕೊಟ್ಟು ಈ ತರಹದ ಪಾಪದ ಕೆಲಸಗಳನ್ನು ಮಾಡಬಾರದು.

## ೩ ನೆಯ ಪರಿಚ್ಛೇದ.



ಅಕೃತಪುಣ್ಯನ ಈ ತರಹದ ಪೂರ್ವಭವದ ವೃತ್ತಾಂತವನ್ನು ಹೇಳಿ ಮುನೀಶ್ವರರು—ಎಲೈ ಧನ್ಯಕುಮಾರನೇ ಇನ್ನು ಮುಂದೆ ಅಕೃತಪುಣ್ಯನ ಮತ್ತು ವೃಷ್ಟದಾನನ ಅವಸ್ಥೆ ಏನಾಯಿತೆಂಬುವ ಬಗ್ಗೆ ಹೇಳುತ್ತೇನೆ, ಚಿತ್ತವಿಟ್ಟು ಕೇಳು.

ಒಂದಾನೊಂದು ದಿವಸ ಅಕೃತಪುಣ್ಯನು ಸುಕೃತಪುಣ್ಯನ ಹೊಲಕ್ಕೆ ಹೋಗಿದ್ದನು. ಆಗ ಸುಕೃತಪುಣ್ಯನು ಅಕೃತಪುಣ್ಯನ ಈ ತರಹದ ಬಡ ತನವನ್ನು ನೋಡಿ ಅಂತಃಕರುಣದಿಂದ:—ಅಕೃತಪುಣ್ಯನೇ ನೀನು ಇನ್ನು ಮೇಲೆ ಒಕ್ಕಲತನ ಮುಂತಾದ ಈ ತರಹದ ಕಷ್ಟದ ಹೋರೆಗಳನ್ನು ಮಾಡ ಬೇಡ. ನಿನ್ನ ಉಪಜೀವನದ ಸಲುವಾಗಿ ಸಾಕಾಗುವಷ್ಟು ಹಣ ಕೊಡುವೆ ನೆಂದು ಹೇಳಿ ಅವನ ಕುಟುಂಬ ನಿರ್ವಾಹವು ಸಾಗುವಷ್ಟು ಹಣವನ್ನು ಕೊಟ್ಟನು. ಅಕೃತಪುಣ್ಯನು ಮಹಾ ಪಾಪಿಷ್ಠನಾದ್ದರಿಂದ ಆ ದ್ರವ್ಯವು ಅವನ ಕೈಯೊಳಗೆ ಬರಬರುತ್ತಲೇ ನಾಶವಾಗಿ ಹೋಯಿತು. ಇದನ್ನು ನೋಡಿ ಸುಕೃತಪುಣ್ಯನು ಆಶ್ಚರ್ಯಚಕಿತನಾಗಿ ಮನದೊಳಗೆ—ಸಂಸಾರ

ಚಕ್ರವು ಬಹಳೇ ವಿಲಕ್ಷಣವಾದದ್ದಡೆ. ಒಂದೇ ಜನ್ಮದಲ್ಲಿ ಮನುಷ್ಯನು ಒಮ್ಮೆ ರಾಜವೈಭವಶಾಲಿಯೂ ಮತ್ತು ಒಂದು ಕ್ಷಣದಲ್ಲಿ ಅದೇ ಮನುಷ್ಯನು ರಾಜಸೇವಕನೂ ಆಗುತ್ತಾನೆ. ಈ ಅಕೃತಪುಣ್ಯನ ತಂದೆಯಾದ ಕಾಮವೃಷ್ಟಿಯು ಎಂಥ ಶ್ರೀಮಂತನು ? ಅಂಥವನ ಮಗನಾದ ಇವನಿಗೆ ಈ ಅವಸ್ಥೆಯು ಬರಬೇಕೇ? ದೈವಗತಿಯು. ಎಂದು ಸುಕೃತಪುಣ್ಯನು ಅಕೃತಪುಣ್ಯನಿಗೆ ಕೆಲವು ಆಹಾರದ ಧಾನ್ಯಗಳನ್ನು ಅವನ ಹೊದ್ದುಕೊಳ್ಳುವ ಧೋತರದಲ್ಲಿ ಕಟ್ಟಿ ಕಳಿಸಲಾಗಿ, ಅಕೃತಪುಣ್ಯನು ಅವುಗಳನ್ನು ತನ್ನ ತಾಯಿಯಾದ ಮೃಷ್ಟದಾನಾ ಇವಳಿಗೆ ಕೊಟ್ಟನು. ಮತ್ತು ಹೊಲದಲ್ಲಿ ನಡೆದ ಯಾವತ್ತು ಸಂಗತಿಯನ್ನು ತಾಯಿಗೆ ಹೇಳಿದನು. ಅದನ್ನು ಕೇಳಿ ಮೃಷ್ಟದಾನೆಯು ಅತ್ಯಂತ ಶೋಕಾಕುಲಳಾಗಿ ಮನದೊಳಗೆ—ಯಾವ ಮನುಷ್ಯನನ್ನು ನಮ್ಮ ಸೇವಕನನ್ನಾಗಿ ಮಾಡಿಕೊಂಡು ಸೌಖ್ಯವನ್ನು ಅನುಭವಿಸಿದೆವೋ ಅಂಥವನಲ್ಲಿ ಈಗ ನಾವು ಚಾಕರಿಗಾಗಿ ನಿಲ್ಲಬೇಕಾಯಿತಲ್ಲವೆ! ಎಂದು ಆಲೋಚಿಸಿ, ಇನ್ನು ಮೇಲೆ ನಾವು ಇಲ್ಲಿ ನಿಲ್ಲುವದು ಸರಿಯಲ್ಲ. ದೇಶಾಂತರ ಹೋಗಬೇಕೆಂದು ಆಲೋಚಿಸಿ ಆಕೆಯು ವಿಚಾರ ಮಾಡಿ ಭೋಗಾವತಿ ಪಟ್ಟಣವನ್ನು ಬಿಟ್ಟು ಮಾಳವದೇಶದೊಳಗಿನ ಶಮೀ ಪಟ್ಟಣಕ್ಕೆ ಹೋಗಿ ನಿಂತಳು. ಆ ಪಟ್ಟಣದಲ್ಲಿ ಬಲಭದ್ರನೆಂಬ ಸಾವುಕಾರ ನಿದ್ದು ಅವನಿಗೆ ಏಳುಮಂದಿ ಮಕ್ಕಳಿದ್ದು ಅವನ ಹೆಂಡತಿಯು ಮಾತ್ರ ಸತ್ತಿದ್ದಳು. ಅವರ ಮನೆಗೆ ಹೋಗಿ ಅಲ್ಲಿ ಅಡಿಗೆ ಮಾಡಲಿಕ್ಕೆ ನಿಂತಳು. ಮತ್ತು ಮಗನಾದ ಅಕೃತಪುಣ್ಯನು ಬಲಭದ್ರ ಸಾವುಕಾರನ ಆಕಳುಗಳನ್ನು ಮೇಯಿಸುವ ಚಾಕರಿಗಾಗಿ ನಿಂತನು. ಒಂದಾನೊಂದು ದಿವಸ ಬಲಭದ್ರ ಸಾವುಕಾರನ ಎಲ್ಲ ಮಕ್ಕಳು ಮೃಷ್ಟಾನ್ನವನ್ನು ಊಟ ಮಾಡಲಿಕ್ಕೆ ಕೂತ ಕಾಲಕ್ಕೆ ಅಕೃತಪುಣ್ಯನು ಅಲ್ಲಿಗೆ ಹೋಗಿ—ಅವ್ವಾ ನನಗೆ ಪಾಯಸವನ್ನು ಊಟಕ್ಕೆ ಹಾಕೆಂದು ಕೇಳಲಾಗಿ ತಾಯಿಯು ದುಃಖದಿಂದ—ಮಗುವೇ ನೀನು ಪೂರ್ವಜನ್ಮದಲ್ಲಿ ಜಿನಪೂಜಾ, ಸತ್ಪಾತ್ರದಾನ, ವ್ರತೋಪವಾಸ ಮುಂತಾದ ಸುಕೃತ್ಯಗಳನ್ನು ಮಾಡಿರುವದಿಲ್ಲ. ಆದ್ದರಿಂದ ನಿನಗೆ ಈ ಮೃಷ್ಟಾನ್ನವೂ ಮತ್ತು ಇತರ ಯಾವ ಸೌಖ್ಯಗಳೂ ಸಿಗಲಾರವೆಂದು ಹೇಳಿದಳು. ಈ ಪ್ರಕಾರ ತಾಯಿಯು ಆಡಿದ ಮಾತುಗಳನ್ನು ಅಕೃತಪುಣ್ಯನು

ಕೇಳಿ ಬಹಳ ಅಳಹತ್ತಿದನು; ಅದನ್ನು ಆ ಸಾವ್ಕಾರನ ಮಕ್ಕಳು ನೋಡಿ ಅವನಿಗೆ ಚಪಾತಿಯ ತುಣುಕಗಳನ್ನು ಕೊಟ್ಟು ಹೊರಗೆ ಹಾಕಿದರು. ಅವನು ನಿರಾಶೆಯಾದ್ದರಿಂದ ಅವನಿಗೆ ಅತಿಶಯ ದುಃಖವಾಗಿ ದಿನೇ ದಿನೇ ಸೊರಗುತ್ತ ನಡೆದನು. ಅವನನ್ನು ನೋಡಿ ಬಲಭದ್ರನು ಈ ಅಕೃತ ಪುಣ್ಯನು ಯಾಕೆ ಇಷ್ಟು ಕ್ಷೀಣನಾದನೆಂಬುವ ಬಗ್ಗೆ ವಿಚಾರ ಮಾಡಿ ವೃಷ್ಟದಾನೆಯನ್ನು ಕರೆದು ನನ್ನ ಏಳು ಮಂದಿ ಮಕ್ಕಳೊಡನೆ ಇವನಿಗೂ ಯಾಕೆ ವೃಷ್ಟಾನ್ನವನ್ನು ಹಾಕಲಿಲ್ಲೆಂದು ಕೇಳಿದನು.

ವೃಷ್ಟದಾನೆಯು—ಅಣ್ಣನವರೇ ನಾನು ಅದಾತ್ತದಾನ (ಯಾರಾದರೂ ಕೈ ಎತ್ತಿ ಕೊಡದೆ ಇದ್ದದ್ದನ್ನು ತಕ್ಕೊಳ್ಳದಿರೋಣ) ವ್ರತೀಕಳಿದ್ದೇನೆ ಎಂದಳು. ಆದ್ದರಿಂದ ನಿಮ್ಮ ಅಪ್ಪಣೆಯ ಹೊರ್ತು ಅವನಿಗೆ ಹ್ಯಾಗೆ ಆಹಾರವನ್ನು ಕೊಡಲಿ ?

ಬಲಭದ್ರನು ಮನದಲ್ಲಿ ಅತಿ ಸಂತುಷ್ಟನಾಗಿ—ಅವ್ವಾ ನೀನು ಬಹಳೇ ಉತ್ತಮಳು. ನಿನ್ನಂತೆ ಶೀಲವ್ರತವುಳ್ಳವರೂ ಮತ್ತು ಸತ್ಯ ಮಾತಾಡುವವರೂ ಈ ಜಗತ್ತಿನಲ್ಲಿ ಬಹಳೇ ಕಡಿಮೆ. ಈ ಪ್ರಕಾರ ಆಕೆಯ ಪ್ರಸಂಶೆಯನ್ನು ಮಾಡಿ ಬಲಭದ್ರನು ಆಕೆಗೆ ಹಾಲು, ಅಕ್ಕಿ, ತುಪ್ಪ ಮುಂತಾದ ಪಾಯಸದ ಯಾವತ್ತೂ ಸಾಮುಗ್ರಿಗಳನ್ನು ಕೊಟ್ಟು ನಿನ್ನ ಮಗನಿಗೆ ಈ ಪಕ್ವಾನ್ನವನ್ನು ಮಾಡಿ ಹಾಕೆಂದು ಆಜ್ಞಾಪಿಸಿದನು. ಆ ಮೇಲೆ ಆಕೆಯು ಆ ಸಾಮುಗ್ರಿಗಳನ್ನು ಮನೆಗೆ ತಕ್ಕೊಂಡು ಬಂದು ಮಡಿಯಿಂದ ಸೀಯಾಗುವಂತೆ ಪಕ್ವಾನ್ನವನ್ನು ಮಾಡಿ ಮಗುವಿಗೆ ಕರೆದು—ಮಗುವೇ ಇಂದಿನ ದಿವಸ ನಿನ್ನ ಸಲುವಾಗಿ ಪಕ್ವಾನ್ನವನ್ನು ತಯಾರಿಸಿರುವೆನು. ಆದರೆ ನೀನೊಬ್ಬನೇ ಊಟ ಮಾಡಿದರೆ ನಿನಗೆ ಇಂದಿನ ದಿವಸ ಒಂದೇ ಸೌಖ್ಯವಾದೀತು. ಆದ್ದರಿಂದ ಮೊದಲು ನೀನು ಸತ್ಪಾತ್ರರಿಗೆ ದಾನಕೊಟ್ಟು ಉಳಿದದ್ದು ನೀನು ಊಟಮಾಡು. ಅಂದರೆ ನಿನ್ನ ದರಿದ್ರತನವು ದೂರಾಗಿ ಮುಂದೆ ಬಹಳೇ ಪುಣ್ಯಬಂದು ನೀನು ಸೌಖ್ಯಹೊಂದುವಿ ಎಂದು ಹೇಳಿದಳು. ಈಗ ಊರಲ್ಲಿ ಮುನೀಶ್ವರರು ಆಹಾರಾರ್ಥವಾಗಿ ಬರತಕ್ಕ ವೇಳೆ ಆಗಿದೆ. ನೀನು ಅವರ ದಾರೀ ನೋಡುತ್ತ ಬಾಗಿಲಲ್ಲೇ ಕುಳಿತುಕೊಳ್ಳು-

ನಾನು ಮಡಿನೀರನ್ನು ತರಲಿಕ್ಕೆ ಹೋಗುತ್ತೇನೆಂದು ಕೊಡವನ್ನು ತಕ್ಕೊಂಡು ನೀರು ತರಲಿಕ್ಕೆ ಹೋದಳು. ಅಷ್ಟರಲ್ಲಿ ಅವರ ಬಾಗಿಲ ಸಮೀಪಕ್ಕೆ ಉಪವಾಸದಿಂದಲೂ ಮತ್ತು ಕಷ್ಟಕರ ತಪಶ್ಚರ್ಯದಿಂದಲೂ ಅತಿ ಕ್ಷೀಣನಾದ ಸುವ್ರತನೆಂಬ ಒಬ್ಬ ಮುನೀಶ್ವರನು ಬಂದನು. ದ್ರವ್ಯಸಂಚಯವನ್ನೇ ಕಂಡಂತೆ ಆ ಮುನೀಶ್ವರನನ್ನು ಅಕೃತಪುಣ್ಯನು ನೋಡಿ ಮುನಿಯ ಬಳಿಗೆ ಮುಗ್ಧಭಾವದಿಂದ ಹೋಗಿ ಅವರ ಪಾದಕ್ಕೆರಗಿ–'' ಮುನಿಶ್ರೇಷ್ಠನೇ ಮುಂದೆ ಹೋಗಬೇಡಿರಿ ನಿಲ್ಲಿರಿ ! ನಿಲ್ಲಿರಿ ! ಈಹೊತ್ತಿನ ದಿವಸ ನಿಮ್ಮ ಸಲುವಾಗಿಯೇ ನಮ್ಮ ಮನೆಯಲ್ಲಿ ಉತ್ತಮ ಪಾಯಸವು ತಯಾರಾಗಿದೆ. ಆಹಾರವನ್ನು ತಕ್ಕೊಂಡು ನಮ್ಮನ್ನು ಕೃತಕೃತ್ಯರನ್ನಾಗಿ ಮಾಡಿರಿ. ಎಂದೆನಲು ಮುನೀಶ್ವರರು ಕೇವಲ ನನ್ನ ಸಲುವಾಗಿ ಪಾಯಸ ಮಾಡಿದ್ದೀರಿ. ಅದು ನಮ್ಮ ಆಹಾರಕ್ಕೆ ಅಯೋಗ್ಯವಾದದ್ದೆನ್ನುತ್ತ ಮುನೀಶ್ವರರು ಮುಂದೆ ನಡೆಯಹತ್ತಲಾಗಿ ಅಕೃತಪುಣ್ಯನು ನಾನು ನಿಮ್ಮಕ್ಕಿಂತಲೂ ಸಶಕ್ತನಿದ್ದೇನೆ. ನೀವು ಮುಂದೆ ಹ್ಯಾಗೆ ಹೋಗುತ್ತೀರಿ ನೋಡುವಾ ! ಎಂದು ಹೇಳಿ ಅವರ ಪಾದಗಳನ್ನು ಘಟ್ಟಿಯಾಗಿ ಹಿಡಿದನು. ನಿಮಗೆ ಪಾಯಸದ ಆಹಾರವನ್ನು ಕೊಡುವತನಕ ಬಿಡುವದಿಲ್ಲವೆಂದನು. ಇಷ್ಟರಲ್ಲಿ ಮೃಷ್ಟದಾನಿಯು ನೀರನ್ನು ತಿಗೆದುಕೊಂಡು ಬಂದು ಅತಿ ಭಕ್ತಿಯಿಂದ ಮುನೀಶ್ವರನನ್ನು ನೋಡಿ ಸ್ವಾಮಿಮಹಾರಾಜರೇ ಚಂಚಲವೃತ್ತಿಯನ್ನು ಮಾಡಬೇಡರಿ. ನಮುಸ್ಕಾರವು ನಮುಸ್ಕಾರವು ಎಂದು ಮೂರಾವರ್ತಿ ನಮಸ್ಕರಿಸಿ ಸ್ಥಾಪನ ಮನಃಶುದ್ಧಿ, ಕಾಯಶುದ್ಧಿ, ಉಚ್ಚಾಸನ, ಪಾದಪ್ರಕ್ಷಾಲನ, ಪಾದಪೂಜಾ, ನಮಸ್ಕಾರ, ವಾಕ್‌ಶುದ್ಧಿ, ಮತ್ತು ಏಷಣಾ ಶುದ್ಧಿ ( ಆಹಾರಶುದ್ಧಿ ) ಈ ಪ್ರಕಾರ ಎಂಟು ತರದ ಪುಣ್ಯವನ್ನು ಸಂಪಾದಿಸಿ ಮುನೀಶ್ವರರಿಗೆ ಆಹಾರವನ್ನು ಕೊಟ್ಟಳು. ಆ ಮೇಲೆ ಆ ಮುನಿವರ್ಯನು ಆ ಉಭಯತರಿಗೂ ನಿಮಗೆ ಧರ್ಮಲಾಭವಾಗಲೆಂದು ಆಶೀರ್ವದಿಸಿ, ಗಿರಿಕಂದರಗಳಿಗೆ ಪುನಃ ತಪಶ್ಚರ್ಯಕ್ಕೆ ಮರಳಿ ಹೋದರು. ಬಳಿಕ ತಾಯಿಯೂ, ಮಗನೂ ಯಥೇಚ್ಛವಾಗಿ ಪಾಯಸವನ್ನು ಉಂಡು ತೃಪ್ತರಾದರು. ಆದರೆ ಮುನೀಶ್ವರರು ಅಕ್ಷೀಣಾರ್ಧಿ ಮಹಾತ್ಮೆಯ ಮೂಲಕ ಆ ಪಾತ್ರಿಯೊಳಗಿನ ಪಾಯಸವು ಅರ್ಧ ಸಹಿತ ಕಡಿಮೆಯಾಗಿದ್ದಿಲ್ಲ.

ಆ ಮೇಲೆ ಬಲಭದ್ರನಿಗೂ ಅವರ ಮನೆಯೊಳಗಿನ ಯೂವತ್ತೂ ಜನರಿಗೂ ಆ ಪಾಯಸವನ್ನು ಊಟಕ್ಕೆ ಹಾಕಿದರೂ ಆ ಪಾತ್ರೆಯೊಳಗಿನ ಪಾಯಸವು ತೀರದ್ದರಿಂದ ಎಲ್ಲರೂ ನೋಡಿ ಬೆರಗಾದರು. ಮತ್ತು ಶಮೀನಗರದೊಳಗಿನ ಯೂವತ್ತು ಶ್ರಾವಕರಿಗೆ ಕರೆದು ಊಟಕ್ಕೆ ಹಾಕಿದರು ಈ ಪ್ರಕಾರ ಆ ದಿವಸಗಳನ್ನು ಆನಂದದಿಂದ ಕಳೆದು ಅವರು ಯಶಸ್ವಿಗಳಾದರು. ಅವರ ಈ ತರದ ಭಕ್ತಿಯನ್ನು ಎಲ್ಲರೂ ಕೊಂಡಾಡಿದರು; ಆ ಮೇಲೆ ಎರಡನೇ ದಿವಸ ಉಳಿದ ತಂಗಳ ಪಾಯಸವನ್ನು ಅಕೃತಪುಣ್ಯನು ಹೊಟ್ಟೆತುಂಬ ಉಂಡು ಆಕಳುಗಳನ್ನು ಮೇಯಿಸಲಿಕ್ಕೆ ಹೋದನು. ವಿಶೇಷ ಉಂಡದ್ದರಿಂದ ಅವನು ನಿದ್ದೆಗೈದು ಸಂಜೆಯತನಕ ಎಚ್ಚರಿಯಲಿಲ್ಲವು. ಸಂಜೆಯಾದ್ದರಿಂದ ಆಕಳುಗಳು ತಾವಾಗಿಯೇ ಮನೆಗೆ ಬಂದವು. ಎಲ್ಲ ದನಕರಗಳು ಬಂದಾಗ್ಯೂ ಅಕೃತಪುಣ್ಯನು ಬಾರದ್ದರಿಂದ ತಾಯಿಯಾದ ವೃಷ್ಟದಾನೆಯು ಅತಿ ಶೋಕಾಕುಲಳಾದಳು. ಅದನ್ನು ನೋಡಿ ಬಲಭದ್ರನು ಕನಿಕರಪಟ್ಟು ಅಕೃತಪುಣ್ಯನನ್ನು ಹುಡುಕಲಿಕ್ಕೆ ಅಡವಿಗೆ ಹೋಗಲು ಅಷ್ಟರಲ್ಲಿ ಅಕೃತಪುಣ್ಯನು ಎಚ್ಚರಾಗಿ ನೋಡುತ್ತಾನೆ. ಆಕಳುಗಳಿಲ್ಲ. ಮನೆಗೆ ಹೋಗಿರಬಹುದೆಂದು ಆಲೋಚಿಸಿ, ಉತ್ಸುಕತೆಯಿಂದ ಮನೆಯ ದಾರೀ ಹಿಡಿದು ಬರಹತ್ತಿದನು. ದಾರಿಯಲ್ಲಿ ಬಲಭದ್ರನು ತನ್ನ ಕಡೆಗೇ ಬರುವದನ್ನು ಕಂಡು ಮನದೊಳಗೆ-ಆಕಳುಗಳು ಮನೆಗೆ ಹೋಗಿರಲಿಕ್ಕಿಲ್ಲ. ಅವುಗಳನ್ನು ಹುಡುಕುವ ಸಲುವಾಗಿ ಬಲಭದ್ರನು ಬರುತ್ತಾನೆ. ನಾನು ಆತನ ದೃಷ್ಟಿಗೆ ಬಿದ್ದರೆ ನಿಶ್ಚಯವಾಗಿ ಬಡಿಯುವನೆಂದು ತಿಳಿದು ಅಲ್ಲಿಂದ ಹಿಂದಕ್ಕೆ ತಿರುಗಿ ಅರಣ್ಯದಲ್ಲಿ ಹೋಗಲು ಸುವ್ರತಮುನಿಯು ಮೌನವೃತ್ತಿಯಿಂದ ಜಪಮಾಡುವದನ್ನು ನೋಡಿ ಆತನನ್ನು ತ್ರಿಕರಣ ಶುದ್ಧಿಯಿಂದ ನಮಸ್ಕರಿಸಿ ಅವನ ಪಾದಕಮಲಗಳೆದುರಿಗೆ ಆಶ್ಚರ್ಯಚಕಿತನಾಗಿ ಸುಮ್ಮನೇ ನಿಂತನು. ಅತ್ತ ಬಲಭದ್ರನಿಗೆ ಅಕೃತಪುಣ್ಯನ ಶೋಧ ಹತ್ತದ್ದರಿಂದ ನಿರಾಶೆಯಾಗಿ ಮನೆಗೆ ಬಂದನು. ಬಳಿಕ ಮುಂಜಾನೆ ಸುವ್ರತಮುನಿಗಳಿಗೆ ವಂದಿಸುವಗೋಸ್ಕರ ಅನೇಕ ಜನ ಶ್ರಾವಕರು ಬರಲಾಗಿ ಅವರಿಗೆ ಮುನೀಶ್ವರರು ಧರ್ಮೋಪದೇಶವನ್ನು ಮಾಡಿದರು. ಆ ಭಕ್ತಶ್ರಾವಕರೊಡನೆಯೇ ಅಕೃತಪುಣ್ಯನಿಗೂ

ಧರ್ಮೋಪದೇಶದ ಫಲವೂ ಶಿಕ್ಕಿತು. ಆ ಮೇಲೆ ಅಕೃತಪುಣ್ಯನು ಮುನಿಗೆ ಪುನಃ ವಂದಿಸಿ ತನಗುಚಿತವಾದ ಕೆಲವು ವ್ರತಗಳನ್ನು ತಕ್ಕೊಂಡು ಮನೆಗೆ ಬರಬೇಕೆಂದು ಹೊರಟನು. ಆಗ್ಗೆ ಮುನೀಶ್ವರರು ಸಂಕಟಸಮಯದಲ್ಲಿ "ಣಮೋಕಾರ ಮಂತ್ರ" ವನ್ನು ಜಪಿಸಿರೆಂದು ಹೇಳಿ ಆಶೀರ್ವಾದವನ್ನು ಕೊಟ್ಟರು. ಈ ಪ್ರಕಾರ ಣಮೋಕಾರ ಮಂತ್ರವನ್ನು ಅನ್ನುತ್ತ ಆ ಭಯಂಕರ ಅಡವಿಯೊಳಗಿಂದ ಬರುತ್ತಿರಲು ದಾರಿಯಲ್ಲಿ ಒಂದು ವ್ಯಾಘ್ರವು ಅವನನ್ನು ಹಿಡಿದು ಮುರಿದು ತಿಂದುಬಿಟ್ಟಿತು. ಆ ವೇಳೆಯಲ್ಲಿ ಸಹ ಮಹಾ ಮಂತ್ರವನ್ನು ಅಕೃತಪುಣ್ಯನು ಪಠಿಸುತ್ತಿದ್ದನಾದ್ದರಿಂದಲೂ, ಮುನಿಗೆ ಆಹಾರವನ್ನು ಕೊಟ್ಟದ್ದರಿಂದಲೂ, ಅವನು ಮುಂದೆ ಸೌಧರ್ಮಸ್ವರ್ಗದೊಳಗೆ ಮಹರ್ಧಿಕ ದೇವನಾದನು. ಅಲ್ಲಿ ಹೋದಬಳಿಕ ಉಪಪಾದಶಿಲೆಯ ಮೇಲೆ ಒಂದು ಮುಹೂರ್ತ ಕೂತಬಳಿಕ ಹೊಸ ಸೌಂದರ್ಯರೂಪವುಳ್ಳವನಾಗಿ ಉತ್ತಮ ವಸ್ತ್ರಾಭರಣ ಅಲಂಕೃತನಾದನು. ಅವನು ಅಲ್ಲಿಯ ಸಂಪತ್ತಿಯನ್ನು ನೋಡಿ ಮನದೊಳಗೆ ವಿಸ್ಮಯಗೊಂಡು ನಾನು ಯಾರು? ಈ ಭವ್ಯ ಮನೋಹರ ಪ್ರದೇಶವು ಯಾರದು? ನಾನು ಯಾರ ಪುಣ್ಯಬಲದಿಂದ ಬಂದೆನು. ನನ್ನನ್ನು ಇಲ್ಲಿಗೆ ಯಾರು ತಂದರು. ಈ ವಿಮಾನವು ಎಷ್ಟು ಸುಂದರವದೆ? ಈ ಹೆಂಗಸರ ರೂಪಲಾವಣ್ಯವನ್ನು ಎಷ್ಟೆಂತು ಬಣ್ಣಿಸಲಿ ಈ ಪ್ರಕಾರ ವಿಚಾರಮಾಡುತ್ತಿರುವಷ್ಟರಲ್ಲಿ ಆ ಮಹರ್ಧಿಕ ದೇವರಿಗೆ ಅವಧಿಜ್ಞಾನವು ಪ್ರಾಪ್ತವಾಯಿತು. ತನ್ನ ಅವಧಿಜ್ಞಾನದಿಂದ ತನ್ನ ಪೂರ್ವಭವವನ್ನು ತಿಳಕೊಂಡು ಅವನು ಜಿನೇಶ್ವರ ಶ್ರೇಷ್ಠನ ಪೂರ್ಣಭಕ್ತನಾದನು. ನನಗೆ ಯಾವ ಜಿನೇಶ್ವರನ ನಾಮಸ್ಮರಣದಿಂದಲೇ ಈ ಸಂಪತ್ತಿಯು ದೊರಕಿತೋ, ಅಂಥವನ ಪೂಜಾ, ಅರ್ಚಾ, ಪ್ರಾರ್ಥನೆಯಿಂದ ನನಗೆ ಮೋಕ್ಷಪದವಿಯು ಶಿಗುವದೆಂದು ತಿಳಿದು ಅದರಂತೆ ಪೂಜಾರ್ಚನೆಗಳನ್ನು ಮಾಡಿ ನಂತರ ಪಶ್ಚಾತ್ ಸ್ವರ್ಗದೊಳಗಿನ ಯಾವತ್ತು ರಾಜ್ಯಸೌಖ್ಯಗಳನ್ನು ಅನುಭೋಗಿಸುತ್ತಿದ್ದನು.

ಅತ್ತ ಕಡೆಗೆ ಎರಡನೇ ದಿವಸವಾದರೂ ವೃಷ್ಟದಾನೆಯೂ ಬಲಭದ್ರನೂ ಅಕೃತಪುಣ್ಯನ ಶೋಧವನ್ನು ಎಷ್ಟು ಮಾಡಿದರೂ ಅವನು

ಎಲ್ಲಿಯೂ ಸಿಗದ್ದರಿಂದ ಅತಿಶಯ ದುಃಖಿತರಾದರು. ಇದು ಸ್ವರ್ಗದೊಳ ಗಿದ್ದ ಮಹರ್ಧಿಕ ದೇವನಿಗೆ ಅವಧಿಜ್ಞಾನದಿಂದ ತಿಳಿಯಿತು. ಆಗ್ಗೆ ಅವನು ತನ್ನ ದೇವಿಯೊಡನೆ ದಿವ್ಯವಿಮಾನದೊಳಗೆ ಕುಳಿತುಕೊಂಡು ಬಂದು, ಧರ್ಮ ಶ್ರದ್ಧೆಯಗೋಸ್ಕರ ಅವರಿಗೆ ಧರ್ಮೋಪದೇಶ ಮಾಡಬೇಕೆಂದು ಅವರಿದ್ದ ಸ್ಥಳಕ್ಕೆ ಬಂದನು. ಮತ್ತು ತನ್ನ ಪೂರ್ವ ಸ್ವರೂಪವನ್ನು ಹೊಂದಿ ತಾಯಿಗೆ—ತಾಯೀ ನೀನು ನನ್ನ ಸಲುವಾಗಿ ವ್ಯರ್ಥ ದುಃಖಮಾಡಬೇಡ. ಇನ್ನು ಮೇಲೆ ಆ ನನ್ನ ಭೆಟ್ಟಿಯು ನಿನಗೆ ಆಗಲರಿಯದು. ನಾನು ಸತ್ಪಾತ್ರ ದಾನ ಮಹಿಮೆಯಿಂದ ಸ್ವರ್ಗದೊಳಗಿನ ಮಹರ್ಧಿಕ ದೇವನಾಗಿರುವೆನು. ಈಗ ಅಜಮಾಸು ೩-೪ ತಾಸಿನ ಕೆಳಗೆ ಒಂದು ದೊಡ್ಡ ಹುಲಿಯು ನನ್ನನ್ನು ತಿಂದಿತ್ತು. ಇಷ್ಟರಲ್ಲಿ ಮಹಾಮಂತ್ರದ ಪ್ರಭಾವನೆಯಿಂದ ಈ ಸ್ವರ್ಗ ಸಂಪತ್ತಿಯು ನನಗೆ ದೊರೆಯಿತು. ಆದ್ದರಿಂದ ಇನ್ನು ಮೇಲೆ ನನ್ನ ಸಲು ವಾಗಿ ನೀವು ವ್ಯರ್ಥ ದುಃಖಮಾಡುವದನ್ನು ಬಿಡಿರಿ. ಇಲ್ಲದಿದ್ದರೆ ಅದರಿಂದ ಸದ್ಗತಿಯಾಗದೆ ದುರ್ಗತಿಯಾದೀತು. ಇನ್ನು ಮೇಲೆ ನೀವೂ ದೇವಪೂಜಾ, ಶಾಸ್ತ್ರಶ್ರವಣ, ಗುರುಶೇವಾ ಮುಂತಾದವುಗಳನ್ನು ಮಾಡುತ್ತಾ ಹೋದರೆ ನಿಮಗೂ ಸುಲಭವಾಗಿ ಸ್ವರ್ಗಸೌಖ್ಯವು ಸಿಗುವದು. ಈ ಪ್ರಕಾರ ನಮ್ರ ನುಡಿಗಳಿಂದ ಅವರಿಗೆ ಬೋಧಿಸಿ, ತನ್ನ ವಿಮಾನದಲ್ಲಿ ಕುಳಿತುಕೊಂಡು ದೇವಲೋಕಕ್ಕೆ ಹೋದನು. ಇತ್ತ ವೃಷ್ಟದಾನೆಯು ಪುತ್ರವಿಯೋಗದಿಂದ ದುಃಖಿತಳಾಗಿ ಭವಾಂತರದಲ್ಲಿಯಾದರೂ ಅಕೃತಪುಣ್ಯನು ನನ್ನ ಉದ ರದಲ್ಲಿ ಜನಿಸಲೆಂದು ಅನೇಕ ತಪಶ್ಚರ್ಯಗಳನ್ನು ಮಾಡಿದಳು. ಆ ತಪೋಬಲದಿಂದ ಅದೇ ಸೌಧರ್ಮದೊಳಗೆ ದೇವಿಯಾಗಿ ಜನಿಸಿದಳು. ಆ ಮೇಲೆ ಬಲಭದ್ರನು ಸಹಿತ ತನ್ನ ತಪೋಬಲದಿಂದ ಅದೇ ಸ್ವರ್ಗದೊ ಳಗೆ ದೇವನಾದನು. ಅಲ್ಲಿ ಬಹಳ ಸೌಖ್ಯಗಳನ್ನು ಅನುಭವಿಸಿದ ಮೇಲೆ ಅಲ್ಲಿಂದ ಈ ಉಜ್ಜಯನಿಯಲ್ಲಿ ಉದಯಿಸಿ ಧನಪಾಲ ಶ್ರೇಷ್ಠಿಯಾದನು. ಅದೇ ದೇವಿಯಾದ ವೃಷ್ಟದಾನಾ ದೇವಿಯು ಧನಪಾಲ ಶ್ರೇಷ್ಠಿಯ ಪಟ್ಟದ ಹೆಂಡತಿಯಾದ ಪ್ರಭಾವತಿ ರಾಣಿಯಾದಳು.

ಮತ್ತು ಅಲ್ಲಿಯೇ ದೇವನಾಗಿದ್ದ ಅಕೃತಪುಣ್ಯನೇ ಈ ಧನಪಾಲ
ಮತ್ತು ಪ್ರಭಾವತಿ ಪತಿಪತ್ನಿಯರ ಎಂಟನೇ ಮಗನಾದ ಧನ್ಯಕುಮಾರನು
ಮತ್ತು ಬಲಭದ್ರರಿಗೆ ಇದ್ದ ಉಳಿದ ಏಳೂಮಂದಿ ಮಕ್ಕಳು ಅನೇಕ ತಾಯಿ-
ಗಳ ಉದರದಲ್ಲಿ ಜನಿಸಿ ಕಷ್ಟಪಟ್ಟು ಮರಣ ಹೊಂದಿ ಕಡೆಗೆ ಈಗ ಇರುವ
ನಿನ್ನ ಹಿರಿಯ ಏಳು ಜನ ಅಣ್ಣಂದಿರು. ಹೀಗೆ ನಿನ್ನ ಪೂರ್ವಭವವು ಇರು-
ವದೆಂಬದಾಗಿ ಮುನಿವರ್ಯನು ಹೇಳಿದನು. ಪೂರ್ವದಲ್ಲಿ ಯಾವ ಬಲ
ಭದ್ರನ ಏಳು ಮಂದಿ ಪಾಯಸವನ್ನು ಊಟಮಾಡುವ ಕಾಲಕ್ಕೆ ( ಅಕೃತ
ಪುಣ್ಯ ) ನೀನು ಪಾಯಸವನ್ನು ಬೇಡಲಾಗಿ ನಿನಗೆ ಸಿಟ್ಟುಮಾಡಿ ಮುಸು
ರೆಯನ್ನು ಕೊಟ್ಟು ಹೊಡೆದಟ್ಟಿದ್ದರೋ ಆ ಏಳು ಜೀವಿಗಳು ಅಭವ್ಯ ಇರು
ವದರಿಂದ ಅವರು ನಿನ್ನ ಹಿರಿಯರಾಗಿ ವಿನಾಕಾರಣಾ ನಿನಗೆ ತ್ರಾಸ ಕೊಡ
ಹತ್ತಿರುವರು. ಪೂರ್ವ ಜನ್ಮದಲ್ಲಿ ( ಅಕೃತಪುಣ್ಯನಿದ್ದ ) ನೀನು ಆಗ್ಗೆ
ಮುನಿಗೆ ಪಾಯಸಾಹಾರವನ್ನು ಕೊಟ್ಟ ಪುಣ್ಯಪ್ರಭಾವದಿಂದಲೇ ನಿನಗೆ
ಇಹ ಜನ್ಮದಲ್ಲಿ ಮೇಲಿಂದ ಮೇಲೆ ದ್ರವ್ಯದ ನಿಧಿಗಳು ಸಿಗಹತ್ತಿವೆ. ಎಲೈ
ಧನ್ಯಕುಮಾರನೇ ! ಈ ಸಂಸಾರವು ಅಲ್ಪ ಸುಖವನ್ನು ಕೊಟ್ಟು ಮಹಾ
ದುಃಖವನ್ನು ಕೊಡುವಂಥಾದ್ದು ಎಂದು ಹೇಳಿದರು. ಆದ್ದರಿಂದ ಈ ಚತು
ರ್ಗತಿಯನ್ನು ಹೊಂದತಕ್ಕಂಥ ಈ ಸಂಸಾರದಲ್ಲಿ ಯಾವ ಮನಷ್ಯನು
ಅರ್ಹತ್‌ಪರಮೇಷ್ಠಿಗಳ ವಚನದಲ್ಲಿ ವಿಶ್ವಾಸವನ್ನಿಟ್ಟು; ಸತ್ಪಾತ್ರದಾನ
ವನ್ನೂ, ಜಿನಪೂಜೆಯನ್ನೂ, ಸದ್ಗುರೋಪದೇಶವನ್ನೂ ಅಹಿಂಸಾದಿ ಪಂಚ-
ಅಣುವ್ರತಗಳನ್ನೂ, ಣಮೋಕಾರ ಮಂತ್ರ ಪಠಣವನ್ನೂ ಜ್ಞಾನಾಭ್ಯಾಸ,
ವಗೈರೆ ಸತ್ಕೃತ್ಯಗಳನ್ನೂ ಮಾಡುವನೋ ಅಂಥವನೇ ಶಾರೀರಕ ಮಾನ
ಸಿಕ ಮತ್ತು ಆಗಂತುಕ ಮುಂತಾದ ನಾಲ್ಕು ದುಃಖಗಳೊಳಗಿಂದ ಪಾರಾಗಿ
ಸದಾನಂದವಾಗುವಂಥಾ ಮೋಕ್ಷಪದವಿಯನ್ನು ಪಡೆದು ಮೂರೂ
ಲೋಕಕ್ಕೆ ಅಧಿಪತಿಯಾಗಿ ಯಾವಾಗಲೂ ಸೌಖ್ಯದಿಂದ ಇರುವನು.

## ೪ನೆಯ ಪರಿಚ್ಛೇದ.



ಬಳಿಕ ಧನ್ಯಕುಮಾರನು ಪುನಃ ಮುನೀಶ್ವರನಿಗೆ ವಂದಿಸಿ ಜಿನೇಶ್ವರನ ಸ್ಮರಣೆಯನ್ನು ಮಾಡುತ್ತ ರಾಜಗೃಹನಗರದ ದಾರೀ ಹಿಡಿದು ಹೋಗಹತ್ತಿದನು. ಮುಂದೆ ಅವನಿಗೆ ಒಣಗಿಹೋದ ಒಂದು ತೋಟವು ಆ ರಾಜಗೃಹನಗರದ ಸಮೀಪಕ್ಕೆ ಕಂಡಿತು. ಸರೋವರದಲ್ಲಿ ನೀರೂ ಕಮಲ ಬಳ್ಳಿಗಳೂ ಇದ್ದಿಲ್ಲ. ಸರ್ವಪ್ರಕಾರದ ಗಿಡಗಳು ಎಲೆಗಳಿಲ್ಲದೆಯೂ ಫಲಗಳಿಲ್ಲದೆಯೂ ಇದ್ದವು. ಅಲ್ಲಿ ಯಾವ ಪ್ರಕಾರದ ಜಲಸಂಚಯವೂ ಇಲ್ಲದ್ದರಿಂದ ಅದು ಬಹಳೇ ಭಯಂಕರವಾಗಿ ಕಾಣಿಸುತ್ತಿತ್ತು. ಆ ತೋಟವು ರಾಜಗೃಹನಗರದಲ್ಲಿ ಒಬ್ಬ ಪ್ರಸಿದ್ಧ ಕುಸುಮದತ್ತನೆಂಬ ಸಾವುಕಾರನದು. ಅವನಿಗೆ ಕುಸುಮಾವಲಿ ಎಂಬುವಳೋರ್ವ ಮಗಳಿದ್ದಳು. ಆಕೆಯು ಬಹು ಸುಂದರಿಯೂ, ಚತುರಳೂ ಇದ್ದದ್ದಲ್ಲದೆ ಆಕೆಯು ಜಿನೇಶ್ವರನ ಮೇಲೆ ಅತಿ ಭಕ್ತಿಯುಳ್ಳವಳಾಗಿದ್ದಳು. ಒಂದಾನೊಂದು ದಿವಸ ಕುಸುಮದತ್ತನು ತೋಟದಲ್ಲಿಯ ಒಣಗಿದ ಗಿಡಗಳನ್ನು ಕಡಿಸಬೇಕೆಂದು ಆಲೋಚಿಸಿದನು. ಆಗ್ಗೆ ಒಬ್ಬ ಅವಧಿಜ್ಞಾನಿಯಾದ ಮುನಿಯು ಕುಸುಮದತ್ತನಿಗೆ ಇನ್ನು ಸ್ವಲ್ಪ ದಿವಸಗಳಲ್ಲಿಯೇ ಈ ಉಧ್ಯಾನವು ಧನ್ಯಕುಮಾರನ ಪಾದಸ್ಪರ್ಶದಿಂದ ಉತ್ತಮ ಸೌಖ್ಯವನ್ನು ಕೊಡುವದು. ಆದ್ದರಿಂದ ಅವರು ಬರುವವರೆಗೆ ಈ ತೋಟದ ರಕ್ಷಣೆಗಾಗಿ ಒಬ್ಬ ಚಾಕರನನ್ನು ಇಡು ಎಂದು ಹೇಳಿದರು ಹೀಗೆಂದು ಹೇಳಿದ ಮುನಿವಚನಗಳ ಮೇಲೆ ವಿಶ್ವಾಸವನ್ನಿಟ್ಟು ಅವನು ಅವುಗಳನ್ನು ಹಾಗೆಯೇ ಬಿಟ್ಟು ಒಂದು ಆಳನ್ನು ಇಟ್ಟನು. ಧನ್ಯಕುಮಾರನ ಪಾದಸ್ಪರ್ಶವು ಆಗಆಗುತ್ತಲೇ ಆ ತೋಟವು ಪ್ರಫುಲ್ಲಿತವಾಗಿ ಹಂಣುಹಂಪಲ ಫಲಗಳಿಂದ ತುಂಬಿ ಶೋಭಿಸಹತ್ತಿತು. ನಾಲ್ಕೂ ಕಡೆಯಿಂದ ಸುಗಂಧದ ಗಾಳಿಯು ಬೀಸಹತ್ತಿತು. ಆರೂ ಋತುಗಳ ಶೋಭೆಯು ಒಮ್ಮಿಂದೊಮ್ಮೆಯೇ ಆಗಹತ್ತಿತು. ಸರೋವರಗಳು ನೀರಿನಿಂದ ತುಂಬಿ ತುಳುಕಹತ್ತಿದವು. ಅದರ ಮೇಲೆ

ಕವುಲಬಳ್ಳಿಗಳು ಹಬ್ಬಿ ಹೂಗಳು ಮಕರಂದವನ್ನು ಬಿಡಹತ್ತಲು ಗುಂಗೀ ಹುಳಗಳು ಮಕರಂದವನ್ನು ಮೇಯುತ್ತ ಝೇಂಕರಿಸಹತ್ತಿದವು. ಹಂಸ ಪಕ್ಷಿಗಳೂ ಸ್ವೇಚ್ಛೆಯಿಂದ ಕ್ರೀಡಿಸಹತ್ತಿದವು. ಮಾವಿನ ಗಿಡಗಳಲ್ಲಿ ಕೋಗಿಲೆಗಳು ಮಾವಿನಹಣ್ಣನ್ನು ಎಥೇಚ್ಛವಾಗಿ ತಿಂದು ಗಾಯನ ಮಾಡಹತ್ತಿದವು. ಈ ಪ್ರಕಾರವಾದ ವನದ ಶೋಭೆಯನ್ನು ಧನ್ಯಕುಮಾರನು ನೋಡಿ ಬಹಳೇ ಆನಂದಪಟ್ಟನು. ಅಲ್ಲಿ ಅವನು ಒಂದು ಸರೋವರದಲ್ಲಿಯ ನೀರು ಕುಡಿದು ದಣುವಾರಿಸಿಕೊಳ್ಳುವಗೋಸ್ಕರ ಒಂದು ಗಿಡದ ಕೆಳಗೆ ಮಲಗಿದನು. ಅಲ್ಲಿಯೇ ಅವನಿಗೆ ಗಾಢನಿದ್ರೆಯು ಹತ್ತಿತು. ಆ ವರ್ತಮಾನವು ಆ ತೋಟದ ಒಡೆಯನಾದ ಕುಸುಮದತ್ತನಿಗೆ ತಿಳಿಯಲಾಗಿ ಅವನು ಆ ತೋಟಕ್ಕೆ ಬಂದು ಧನ್ಯಕುಮಾರನ ಶೋಧವನ್ನು ಮಾಡತೊಡಗಿದನು. ಇಷ್ಟರಲ್ಲಿ ನಿದ್ದೆಯಿಂದ ಎಚ್ಚತ್ತು ಕುಳಿತ ಧನ್ಯಕುಮಾರನು, ಕುಸುಮದತ್ತ ಸಾವುಕಾರನ ದೃಷ್ಟಿಗೆ ಬಿದ್ದನು. ಆಗ್ಗೆ ಅವನ ಹತ್ತರ ಹೋಗಿ ತಾವು ಯಾರು? ಎಲ್ಲಿಂದ ಬಂದಿರಿ? ಯಾವ ಕಡೆಗೆ ಹೋಗುವಿರಿ ಮುಂತಾದ ಕುಶಲ ಪ್ರಶ್ನೆಗಳನ್ನು ಆ ಸಾವುಕಾರನು ಮಾಡಿದನು. ಆಗ್ಗೆ ಧನ್ಯಕುಮಾರನು ನಾನು ಉಜ್ಜಯಿನೀ ನಗರದಲ್ಲಿರುವ ಧನಪಾಲ ಶ್ರೇಷ್ಠಿಯ ಮಗನಾದ ಧನ್ಯಕುಮಾರನು. ನಾನು ರಾಜಗೃಹದಲ್ಲಿರಲಿಕ್ಕೆ ಬಂದಿದ್ದೇನೆ, ಎಂಬದಾಗಿ ಹೇಳಿದನು. ಇದನ್ನು ಕುಸುಮದತ್ತನು ಕೇಳಿ ಬಹಳ ಆನಂದಪಟ್ಟು ಧನ್ಯಕುಮಾರನಿಗೆ ತಮ್ಮ ಮನೆಗೆ ಬರಬೇಕೆಂದು ವಿನಂತಿ ಮಾಡಿದನು. ಈ ನಮ್ರತನಕ್ಕೂ ಮತ್ತು ಆತನ ಸದ್ಗುಣಗಳಿಗೂ ಮೆಚ್ಚಿ ಧನ್ಯಕುಮಾರನು ಕುಸುಮದತ್ತನ ಇಚ್ಛೆಯ ಪ್ರಕಾರ ಅವನ ಮನೆಗೆ ಹೋದನು. ಅಲ್ಲಿ ಹೋದಬಳಿಕ ಧನ್ಯಕುಮಾರನು ಅತಿ ಪ್ರೇಮದಿಂದಲೂ ಭಕ್ತಿಯಿಂದಲೂ ಸ್ನಾನ, ಸಂಧ್ಯಾ, ದೇವಪೂಜಾ ವಗೈರೆ ವಿಧಿಗಳನ್ನು ತೀರಿಸಿಕೊಂಡನಂತರ ಧನ್ಯಕುಮಾರನಿಗೆ ಸಂತೋಷದಿಂದ ಊಟಾ ಮಾಡಿಸಿದನು. ಕುಸುಮದತ್ತನು ನನ್ನ ಮೇಲೆ ಭಕ್ತಿಯುಳ್ಳವನೂ, ಪ್ರೀತಿ ಮಾಡುವವನೂ ಆಗಿರುವದರಿಂದ ತಾನು ಈ ಸ್ಥಳವನ್ನು ಬಿಟ್ಟು ಎರಡನೇ ಕಡೆಗೆ ಹೋಗಬಾರದೆಂದು ನಿಶ್ಚಯಿಸಿ ಅವರ ಮನೆಯಲ್ಲಿಯೇ ನಿಂತನು. ಕೆಲವು ದಿವಸಗಳಾದ ನಂತರ ಕುಸುಮದತ್ತನ ಮಗಳಾದ ಕುಸುಮಮಾಲೆಯು ಧನ್ಯಕುಮಾರನ

ಸುಂದರ ಶರೀರವನ್ನು ನೋಡಿ ಅವನ ಬುದ್ಧಿ ಕುಶಲತೆಗಳನ್ನು ನೋಡುವ ಗೋಸ್ಕರ ಕೆಲವು ಹೂವುಗಳನ್ನು ಧನ್ಯಕುಮಾರನ ಕೈಯಲ್ಲಿ ಕೊಡಲು, ಧನ್ಯಕುಮಾರನು ಎಲ್ಲರಿಗೂ ಚಮತ್ಕಾರವಾಗುವಂಥಾದ್ದೊಂದು ಮಾಲೆ ಯನ್ನು ಮಾಡಿ ಅದನ್ನು ಕುಸುಮಮಾಲೆಗೆ ಕೊಟ್ಟನು. ಆಕೆಯು ಇವನ ಚತುರತನವನ್ನು ನೋಡಿ ಒಳ್ಳೇ ಆನಂದಪಟ್ಟು ಅವನನ್ನು ಲಗ್ನವಾಗಬೇ ಕೆಂದು ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡಳು. ಅಲ್ಲಿಂದ ಆಕೆಯು ರಾಜ ಮಂದಿರದೊಳಗೆ ತನ್ನ ಸಖಿಯಾದ ಚೇಲನಾದೇವಿಯ ಮಗಳಾದ ಗುಣ ವತಿ ಎಂಬ ರಾಜಕನ್ನಿಕೆಗೆ ಆ ಮಾಲೆಯನ್ನು ತೋರಿಸಹೋದಳು. ಗುಣ ವತಿಯು ಆ ಮಾಲೆಯನ್ನು ನೋಡಿ ಬೆರಗಾಗಿ ಯಾವ ಹೂಗಾರನು ಈ ಮಾಲೆಯನ್ನು ಮಾಡಿರುವನು ಎಂದು ಕುಸುಮಮಾಲೆಯನ್ನು ಕೇಳಿದಳು. ಆಗ್ಗೆ ಕುಸುಮಮಾಲೆಯು ಈ ಎಲ್ಲ ಸಂಗತಿಗಳನ್ನು ಹೇಳಿ ಧನ್ಯಕುಮಾರನ ರೂಪಲಾವಣ್ಯವನ್ನು ವರ್ಣಿಸಿದಳು. ಆಗ್ಗೆ ಆ ರಾಜಕನ್ನಿಕೆಗೆ ಅವನನ್ನು ನೋಡುವ ಇಚ್ಛೆಯು ಅತಿಶಯವಾದ್ದರಿಂದ ಆಕೆಯು ಹೂಗಾರನ ಮಗಳ ವೇಷವನ್ನು ಧಾರಣ ಮಾಡಿಕೊಂಡು ಕುಸುಮಮಾಲೆಯ ಮನೆಗೆ ಹೋದಳು. ಧನ್ಯಕುಮಾರನು ಆಕೆಗೆ ಕಾಮದೇವನಂತೆಯೇ ಕಂಡದ್ದ ರಿಂದ ಆಕೆಯು ಅವನನ್ನೇ ಲಗ್ನವಾಗಬೇಕೆಂದು ಮನದೊಳಗಾಲೋಚಿಸಿ ದಳು. ಬಹಳ ವೇಳೆ ಅವನನ್ನು ನೋಡಿ ಅವನ ಧ್ಯಾನಮಾಡುತ್ತಲೇ ತನ್ನ ಅರಮಂದಿರಕ್ಕೆ ತಿರುಗಿ ಬಂದಳು. ಆಕೆಯು ಮನೆಗೆ ಹೋದನಂತರ ಆಕೆಗೆ ಧನ್ಯಕುಮಾರನ ಹೊರತು ಮತ್ತೊಂದು ಏನೂ ನೆನಪಾಗಲೊಲ್ಲದು. ಆ ಮೇಲೆ ಆಕೆಯ ತನುಮನ-ಸ್ವಪ್ನದಲ್ಲಿಯು ಸಹ ಧನ್ಯಕುಮಾರನೇ ಆಗಿಹೋದನು. ಆ ಮೇಲೆ ಒಂದು ದಿವಸ ಧನ್ಯಕುಮಾರನು ಶಹರಶೋಭೆ ಯನ್ನು ನೋಡುವಗೋಸ್ಕರ ಪೇಟೆಯೊಳಗೆ ತಿರುಗಾಡುತ್ತ ಶಾಲಿಭದ್ರ ನೆಂಬ ಒಬ್ಬ ಅಂಗಡಿಕಾರನ ಅಂಗಡಿಯಲ್ಲಿ ಹೋಗಿ ಕುಳಿತನು. ಆ ದಿವಸ ಶಾಲಿಭದ್ರನಿಗೆ ಬಹಳೇ ವ್ಯಾಪಾರವಾಗಿ ಅವನಿಗೆ ವಿಶೇಷ ಲಾಭವಾ ಯಿತು. ಈ ಲಾಭವು ನನಗೆ ಧನ್ಯಕುಮಾರನ ಪಾದಸ್ಪರ್ಶದಿಂದಾಯಿತೆಂದು ತಿಳಿದು ಆತನಿಗೆ ತನ್ನ ತಂಗಿಯಾದ ಸುಭದ್ರೆ ಎಂಬವಳನ್ನು ಅನೇಕ ದ್ರವ್ಯ ಕೊಟ್ಟು ಮದುವೆ ಮಾಡಿಕೊಡಬೇಕೆಂದು ನಿಶ್ಚಯಿಸಿದನು. ಈ ಪ್ರಕಾರ

ಅವನು ತನ್ನ ಕುಶಲತೆಗಳನ್ನು ತೋರಿಸಿ ಪುಣ್ಯಬಲದಿಂದ ಅನೇಕ ಸ್ತ್ರೀಯ-
ರನ್ನು ಕೂಡಿಸಿದನಲ್ಲದೆ ಅಪರಿಮಿತವಾದ ದ್ರವ್ಯವನ್ನು ಸಂಪಾದಿಸಿದನು.
ಹೀಗೆ ಇರಇರುತ್ತ ಒಂದಾನೊಂದು ದಿವಸ ಆ ರಾಜಗೃಹನಗರದ ಧನಿಕ
ವೈಶ್ಯ ಸಾವುಕಾರನು ಡಂಗುರ ಸಾರಿಸಿ ಹೇಳಿದ್ದೇನಂದರೆ:—ಯಾವ ಮನು-
ಷ್ಯನು ಐದು ಕವಡಿವಳನ್ನು ತಕ್ಕೊಂಡು ಹೋಗಿ ಒಂದು ಸಾವಿರ ರೂಪಾ-
ಯಿಗಳನ್ನು ಘಳಿಸುವನೋ ಅವನಿಗೆ ನನ್ನ ಪುತ್ರಿಯಾದ ಲಕ್ಷ್ಮೀವತಿ
ಯನ್ನೂ ಹೇರಳ ದ್ರವ್ಯವನ್ನೂ ಕೊಡುವೆನೆಂದು ಹೇಳಿದನು. ಆಗ್ಗೆ
ಧನ್ಯಕುಮಾರನು ಈ ಕೆಲಸವನ್ನು ನಾನು ಮಾಡುವೆನೆಂದು ಒಪ್ಪಿಕೊಂಡು,
ಎರಡನೇ ದಿವಸ ಬೆಳಿಗ್ಗೆ ಶ್ರೀಕೀರ್ತಿಯು ಹತ್ತಿರ ಹೋಗಿ ಐದು ಕವಡಿಗ
ಳನ್ನು ತಕ್ಕೊಂಡು ಪೇಟೆಯೊಳಗೆ ಹೋದನು. ಅವನು ಆ ಐದು ಕವಡಿಗ
ಳನ್ನು ಒಬ್ಬ ಹೂಗಾರನಿಗೆ ಕೊಟ್ಟು ನಾನಾತರದ ಹೂಗಳನ್ನು ಕೊಂಡು
ಒಂದು ಸುಂದರವಾದ ಹೂವಿನ ಮಾಲೆಯನ್ನು ಮಾಡಿಕೊಂಡು ಪೇಟೆಯೊ
ಳಗಿನ ದೊಡ್ಡ ದಾರೀ ಹಿಡಿದು ನಡೆದನು. ಇಷ್ಟರಲ್ಲಿ ಶ್ರೇಣಿಕಮಹಾರಾ
ಜನ ಮಗನಾದ ಅಭಯಕುಮಾರನು ವನಕ್ರೀಡೆಯನ್ನಾಡಿ ಮನೆಗೆ
ಬರುತ್ತಿದ್ದನು. ಧನ್ಯಕುಮಾರನ ಕೈಯಲ್ಲಿದ್ದ ಅತಿ ರಮಣೀಯವಾದ ಆ
ಹೂಮಾಲೆಯನ್ನು ನೋಡಿ ಆ ರಾಜಕುಮಾರನು ಧನ್ಯಕುಮಾರನು ಹೇಳಿ
ದಂತೆ ಒಂದು ಸಾವಿರ ರೂಪಾಯಿ ಕೊಟ್ಟು ಅದನ್ನು ಕೊಂಡುಕೊಂಡನು.
ಅದೇ ದಿವಸವೇ ಒಂದು ಸಾವಿರ ರೂಪಾಯಿಯನ್ನು ಆ ಶ್ರೀಕೀರ್ತಿ ಶ್ರೇಷ್ಠಿಗೆ
ತೋರಿಸಿ ಅವನ ಅಳಿಯಾದನು. ಇದಾದ ಬಳಿಕ ಶ್ರೇಣಿಕರಾಜನ ಮಗ
ನಾದ ಅಭಯಕುಮಾರನೊಂದಿಗೆ ಜೂಜನ್ನಾಡಿ ಅರಸು ಮಗನ ಮೈಮೇ
ಲಿನ ಅರಿವೆಗಳನ್ನು ಸಹ ಗೆದ್ದುಕೊಂಡನು. ಆಗ್ಗೆ ಆ ರಾಜಪುತ್ರನನ್ನು
ನೋಡಿ ಅವನ ಗೆಳೆಯರು ಬಹಳ ನಕ್ಕರು. ಈ ಅಪಮಾನವು ಅವ
ನಿಗೆ ಸಹಿಸಲಾಗದ್ದರಿಂದ ಅವನು ಧನ್ಯಕುಮಾರನನ್ನು ಒಂದಿಲ್ಲೊಂದು
ಸಮಯದಲ್ಲಿ ಗೆಲ್ಲಬೇಕೆಂದು ಆಲೋಚಿಸಿ, ಒಂದೇಸವನೆ ತಿರುಗುತ್ತಿರುವ
ಒಂದು ಚಕ್ರದ ಮೇಲೆ ಗೊಂಬೆಯನ್ನು ಕೂಡ್ರಿಸಿ ಅದರ ಬಲಗಣ್ಣಿನಲ್ಲಿ
ಒಂದು ಮುತ್ತನ್ನು ಕೂಡ್ರಿಸಿ ಧನ್ಯಕುಮಾರನಿಗೆ ಹೇಳಿದ್ದೇನಂದರೆ—" ಈ
ಗೊಂಬೆಯ ಕಣ್ಣೊಳಗಿನ ಮುತ್ತಿಗೆ ಯಾರು ತಮ್ಮ ಬಾಣದಿಂದ ಹೊಡೆಯು

ವರೋ ಅವರಿಗೆ ಒಂದು ಲಕ್ಷ ರೂಪಾಯಿ ಕೊಡುವೆನು” ಈ ರೀತಿ ಪಂಥ ವನ್ನು ಮಾಡಲು, ಐದು ನೂರು ಜನ ರಾಜಪುತ್ರರು ಆ ಸ್ಥಳಕ್ಕೆ ಬಂದರು, ಮತ್ತು ಆ ಯಾವತ್ತೂ ರಾಜಪುತ್ರರು ಬಾಣಪ್ರಯೋಗ ಮಾಡಿದರು. ಆದರೆ ಅದು ಯಾರಿಗೂ ಸಫಲವಾಗಲಿಲ್ಲ. ಅಭಯಕುಮಾರನೂ ಬಾಣವನ್ನು ಹೊಡೆದು ಹೊಡೆದು ಬೇಸತ್ತನು. ಕಟ್ಟಕಡೆಗೆ ಧನ್ಯಕುಮಾರನು ಸಮೀಪದಲ್ಲಿ ನಿಂತಿದ್ದ ಒಬ್ಬ ರಾಜಪುತ್ರನ ಕೈಯೊಳಗಿನ ಧನುಸ್ಸನ್ನೂ ಒಂದು ಬಾಣವನ್ನೂ ತಕ್ಕೊಂಡು ಚಕ್ರಾಕಾರದಿಂದ ತಿರುಗುತ್ತಿದ್ದ ಮೇಲೆ ಸ್ಥಾಪಿತವಾದಂಥ ಗೊಂಬಿಯ ಕಣ್ಣೊಳಗಿನ ಮುತ್ತಿಗೆ ಬಾಣದಿಂದ ಹೊಡೆದು ಒಂದು ಲಕ್ಷ ರೂಪಾಯಿಗಳ ಇನಾಮನ್ನು ದೊರಕಿಸಿದನು. ಆಗ್ಗೆ ಎಲ್ಲ ರಾಜಪುತ್ರರ ಬಹಳ ಅಪಮಾನವಾಯಿತು. ಮತ್ತು ಧನ್ಯಕುಮಾರನ ಹೆಸರು ನಾಲ್ಕೂ ಕಡೆಗೆ ಪ್ರಸಿದ್ಧಿಗೆ ಬಂತು. ಈ ಸುದ್ದಿಯು ರಾಜಪುತ್ರಿಯಾದ ಗುಣವತಿಗೆ ತಿಳಿದ ಕೂಡಲೆ ಆಕೆಯು ಧನ್ಯಕುಮಾರನನ್ನೇ ಮದುವೆಯಾಗಬೇಕೆಂದು ಅತಿ ಉತ್ಕಂಠಿತಳಾದಳು. ಆಕೆಯು ಹಗಲೂ ರಾತ್ರಿಯೂ ಧನ್ಯಕುಮಾರನ ಆಳಾಪವನ್ನು ಮಾಡಹತ್ತಿದ್ದರಿಂದ ಆಕೆಗೆ ಊಟವು ರುಚಿಸದಂತಾಯಿತು. ರಾತ್ರಿಯಲ್ಲಿ ನಿದ್ರೆಯ ಕಾಲಕ್ಕೂ ಸಹ ಒಮ್ಮಿಂದೊಮ್ಮೆ ಧನ್ಯಕುಮಾರನೇ ? ಧನ್ಯಕುಮಾರನೇ ? ಎಂದು ಬಡಬಡಿಸಹತ್ತಿದಳು. ಈ ಸಂಗತಿಯು ಶ್ರೇಣಿಕ ಮಹಾರಾಜನಿಗೆ ತಿಳಿದ ಕೂಡಲೇ ಅವನು ತನ್ನ ಪ್ರಧಾನ ಮಂಡಳಿಯನ್ನೂ ಮಗನಾದ ಅಭಯಕುಮಾರನನ್ನೂ ಕರಿಸಿ ಧನ್ಯಕುಮಾರನಿಗೆ ಗುಣವತಿಯನ್ನು ಕೊಟ್ಟು ಲಗ್ನ ಮಾಡಬೇಕೆಂದು ಹೇಳಿದನು. ಆಗ್ಗೆ ಅಭಯಕುಮಾರನು ಧನ್ಯಕುಮಾರನ ಸಂಗಡ ದ್ವೇಷ ಮಾಡುತ್ತಿದ್ದನಾದ್ದರಿಂದ ಅವನು ಎಲ್ಲರಕಿಂತಲೂ ಮುಂದೆ ಬಂದು, ಅಪ್ಪಾ ಧನ್ಯಕುಮಾರನು ಯಾವ ವಂಶದಲ್ಲಿ ಜನ್ಮಿಸಿದವನು ಮತ್ತು ಅವನ ಕುಲ ಗೋತ್ರವೂ ಗೊತ್ತಿಲ್ಲ; ಇದು ಅಲ್ಲದೆ ಅವನು ಎರಡನೆಯವನ ಮನೆಯಲ್ಲಿ ಚಾಕರಿಗೆ ನಿಂತವನು. ಆದ್ದರಿಂದ ಅಂಥವನಿಗೆ ನಮ್ಮ ಗುಣವತಿಯನ್ನು ಕೊಡುವದು ಉಚಿತವಲ್ಲೆಂದು ಹೇಳಿದನು. ಯಾವ ಕುಲಗೋತ್ರವು ನಮಗೆ ಗೊತ್ತೇ ಇಲ್ಲ. ಅಂಥವನು ಕೇವಲ ಸುಂದರನೂ, ಪರಾಕ್ರಮಿಯೂ ಇದ್ದಾಗ್ಯೂ ಅವನಿಗೆ ಹೆಣ್ಣು ಕೊಡುವದು ಉಚಿತವಲ್ಲವು. ಆದರೆ ಗುಣ-

ವತಿಯು ಧನ್ಯಕುಮಾರನ ಹೊರ್ತು ಅನ್ಯರನ್ನು ಲಗ್ನವಾಗುವದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿರುವಳು. ಆದ್ದರಿಂದ ಇದಕ್ಕೆ ಒಂದು ಯುಕ್ತಿಯನ್ನು ತೆಗೆದಿರುವೆನು. ಅದೇನಂದರೆ:—ಧನ್ಯಕುಮಾರನನ್ನು ಕೊಲ್ಲಿಸಬೇಕು. ಅಂದರೆ ಗುಣವತಿಗೆ ಆಗ್ಗೆ ಮಾರ್ಗವಿಲ್ಲದಂತಾಗಿ ಮತ್ತೊಬ್ಬ ಯೋಗ್ಯ ಅರಸು ಮಗನನ್ನು ಲಗ್ನಮಾಡಿಕೊಳ್ಳುವಳು. ಇದರ ಹೊರ್ತು ಅನ್ಯಮಾರ್ಗವೇ ಇಲ್ಲೆಂದನು. ಇದನ್ನು ಕೇಳಿ ಶ್ರೇಣಿಕ ಮಹಾರಾಜನು–ಮಗುವೇ ಅಭಯಕುಮಾರನೇ ಅನ್ಯಾಯದಿಂದ ಒಬ್ಬನಿಗೆ ದೇಹಾಂತ ಶಿಕ್ಷೆಯನ್ನು ನಮ್ಮಂಥ ಪ್ರಜಾಪಾಲಕ ಅರಸರು ಕೊಡುವದು ಅಯೋಗ್ಯವಲ್ಲದೆ ಜಗತ್ತಿನಲ್ಲಿ ಅತಿಶಯ ಅಪಕೀರ್ತಿಯನ್ನು ಕೊಡುವಂಥಾದ್ದಾಗಿರುವದು. ಆದ್ದರಿಂದ ಹೀಗೆ ಮಾಡುವದು ನನ್ನ ಮನಸಿಗೆ ಬರುವದಿಲ್ಲೆಂದನು. ಹಾಗಾದರೆ ಇವನನ್ನು ನ್ಯಾಯಮಾರ್ಗದಿಂದಲೇ ಕೊಲ್ಲಬೇಕಾದರೆ ಒಂದು ಉತ್ತಮ ಮಾರ್ಗವದೆ. ಹೇಳುತ್ತೇನೆ ಕೇಳಿರೆಂದು ರಾಜಕುಮಾರನು ಅಂದನು. ಈ ನಗರದ ಪೂರ್ವದಿಕ್ಕಿಗೆ ಒಂದು ಪರ್ವತವದೆ. ಆ ಪರ್ವತದ ಒಂದು ಗುಹೆಯಲ್ಲಿ ಮಹಾಕಾಳಿ ಎಂಬ ದೇವಿಯು ಇದ್ದು ಆಕೆಯು ಮಹಾಕಾಳ ಎಂಬ ಒಬ್ಬ ರಾಕ್ಷಸನ ಹೆಂಡತಿಯಾಗಿರುವಳು. ಅಲ್ಲಿ ಹೋದಂಥಾ ಮನುಷ್ಯನನ್ನು ಆಕೆಯು ಕೊಂದು ಭಕ್ಷಿಸುವಳು. ಆದ್ದರಿಂದ ನೀನು " ಅಲ್ಲಿ ಯಾವ ಮನುಷ್ಯನು ಹೋಗಿ ಒಂದು ರಾತ್ರಿ ಕಾಲ ಕಳೆದು ತಿರುಗಿ ಬರುವನೋ ಅಂಥವನಿಗೆ ನನ್ನ ಮಗಳಾದ ಗುಣವತಿಯನ್ನೂ ಅವನು ಬೇಡಿದ ಒಂದು ದೇಶವನ್ನೂ ಕೊಡುವೆನೆಂದು ಹೇಳಿ, ಡಂಗುರವನ್ನು ಸಾರಿಸೆಂದನು. ಹೀಗೆ ಮಾಡಿದರೆ ಧನ್ಯಕುಮಾರನು ನಾನು ಹೋಗಿ ಬರುವೆನೆಂದು ಗರ್ವದಿಂದ ಹೋಗುವನು. ಮತ್ತು ಹೋದಬಳಿಕ ತಿರುಗಿ ಬರುವದಿಲ್ಲೆಂಬದು ನಿಜವೇ. ಎಂದು ಹೇಳಿದ ಮಗನ ಮಾತು ಶ್ರೇಣಿಕ ಮಹಾರಾಜನಿಗೆ ಯೋಗ್ಯ ಕಂಡದ್ದರಿಂದ ಅವನು ಅದರಂತೆ ಗ್ರಾಮದಲ್ಲಿ ಡಂಗುರ ಹೊಡಿಸಿದನು. ಈ ಪ್ರಕಾರ ಸಾರಿದ ಡಂಗುರದ ವರ್ತಮಾನವನ್ನು ತಿಳಿದು ಈ ಕೆಲಸವನ್ನು ನೀನು ಕೈಕೊಳ್ಳಬೇಡೆಂದು ಧನ್ಯಕುಮಾರನ ಮಿತ್ರರು ಪರಿಪರಿಯಿಂದ ಹೇಳಿದ್ದರೂ ಕೇಳದೆ ಧನ್ಯಕುಮಾರನು ಈ ಕೆಲಸವನ್ನು ಕೈಕೊಂಡನು. ಆ ಮೇಲೆ ಅವನು ಅಂದಿನ ದಿವಸ ಮನಸಿ

ನಲ್ಲಿ ಶ್ರೀ ಅರಹತ್ಪರಮೇಶನ ಪದಕಮಲಗಳನ್ನು ಹಿಡಿದು ನಿರ್ಭಯದಿಂದ
ಗುಹೆಯನ್ನು ಹೊಕ್ಕನು. ಅಲ್ಲಿ ಅವನು ಹೊಕ್ಕ ಕೂಡಲೆ ಅಲ್ಲಿದ್ದಂಥಾ
ಇಷ್ಟ ದೇವತೆಗಳು ಸುಪ್ರಸನ್ನರಾಗಿ ಅವನಿಗೆ ಫಲ, ಪುಷ್ಪ ಮತ್ತು ಮುತ್ತು
ರತ್ನಗಳ ಆರತಿಯನ್ನು ತಂದು ಬೆಳಗಿದರು. ಆ ಮೇಲೆ ಅವನನ್ನು ಮಹಾ
ಕಾಳಿಯು ಹತ್ತರ ಒಯಿದು ಅವನನ್ನು ಉಚ್ಚವಾದ ರತ್ನಖಚಿತ ಸಿಂಹಾಸ
ನದ ಮೇಲೆ ದೇವರಂತೆ ಕೂಡ್ರಿಸಿ ಅವನ ಪೂಜೆಯನ್ನು ಮಾಡಿದರು.
ಪೂಜಾ ಸಮಾರಂಭವು ಮುಗಿದ ಕೂಡಲೆ ಆ ಮಹಾಕಾಳಿಯು ಮತ್ತು
ಅಲ್ಲಿರುವಂಥಾ ಎಲ್ಲಾ ದೇವತೆಯರೂ ಕೂಡಿ ಓ ಪುಣ್ಯಾತಿಶಯರೇ ನಿಮ್ಮ
ದರ್ಶನದಿಂದ ನಾವು ಕೃತಕೃತ್ಯರಾದೆವೆಂದು ಹೇಳಿದರು. ನಾವು ನಿಮ್ಮ
ಸಲುವಾಗಿ ರತ್ನದ ರಾಶಿಯನ್ನು ತಯಾರು ಮಾಡಿ ಇಟ್ಟಿದ್ದೇವೆ. ನೀವು
ಅವುಗಳನ್ನು ತಕ್ಕೊಂಡು ಯೋಗ್ಯ ರೀತಿ ಖರ್ಚು ಮಾಡಿದರೆ ನಮ್ಮ
ಜನ್ಮವು ಸಫಲವಾಗುವದು. ಎಂದು ಹೇಳಿ ಅವನಿಗೆ ಅಮೌಲ್ಯವಾದಂಥ
ವಸ್ತ್ರಾಭರಣಗಳನ್ನು ಒಳ್ಳೇ ಭಕ್ತಿಯಿಂದ ಕೊಟ್ಟರು; ಮತ್ತು ಇಡೀ
ರಾತ್ರಿಯೆಲ್ಲಾ ಗೀತ, ನೃತ್ಯ, ವಾದ್ಯ ಮುಂತಾದವುಗಳಿಂದ ಅವನನ್ನು ಅತಿ
ಸಂತೋಷ ಪಡಿಸಿದರು. ಅರುಣೋದಯಕ್ಕೆ ಮುಂಚಿತವಾಗಿಯೇ ಎದ್ದು
ಮಹಾಕಾಳಿಯು ಕೊಟ್ಟಂಥಾ ವಿಪುಲವಾದ ಎಲ್ಲ ದ್ರವ್ಯವನ್ನು ತೆಗೆದು
ಕೊಂಡು ಸುವರ್ಣಮಯವಾದ ರಥದಲ್ಲಿ ಕೂತುಕೊಂಡು ಶಹರದಲ್ಲಿ ಅತಿ
ಸಂಭ್ರಮದಿಂದ ಬಂದನು. ರಾಜಗೃಹದಲ್ಲಿದ್ದಂಥ ಜನರು ಅವನನ್ನು
ನೋಡಿ ಜಯಜಯಕಾರವನ್ನು ಮಾಡಿದರು. ಈ ಸುದ್ದಿಯು ರಾಜನಿಗೆ
ತಿಳಿದ ಕೂಡಲೆ ರಾಜನು ತನ್ನ ಪರಿವಾರ ಸಮೇತನಾಗಿ ಭೆಟ್ಟಿಗೆ ಬಂದು
ಅವನನ್ನು ಅತಿ ವೈಭವದಿಂದ ತನ್ನ ರಾಜಮಂದಿರಕ್ಕೆ ಕರೆದೊಯ್ದನು.
ಅಲ್ಲಿ ಅವನಿಗೆ ನಾನಾಪ್ರಕಾರದ ವಸ್ತ್ರಾಲಂಕಾರಗಳನ್ನು ಕೊಟ್ಟು ನೀವು
ಸತ್ಯವಾಗಿ ಪುಣ್ಯಪುರುಷರಿರುವಿರಿ. ಆವರೆ ನಿಮ್ಮ ಊರು ಯಾವದು ?
ನೀವು ಯಾರ ಮಕ್ಕಳು ? ಮತ್ತು ಯಾವ ವಂಶದಲ್ಲಿ ಹುಟ್ಟಿರುವಿರಿ ?
ಇದನ್ನು ಹೇಳಬೇಕೆಂಬದಾಗಿ ಅರಸನು ಬಿನ್ನೈಸಿದನು. ಆಗ್ಗೆ ಧನ್ಯಕುಮಾ
ರನು ಸ್ವಲ್ಪ ನಕ್ಕು ತನ್ನ ಎಲ್ಲ ಸಂಗತಿಯನ್ನು ಹೇಳತೊಡಗಿದನು. ನಾನು
ಉಜ್ಜಯನಿ ನಗರದಲ್ಲಿರುವ ಧನಪಾಲ ಶೆಟ್ಟಿಯ ಮಗನಿದ್ದು ನನಗೆ ಏಳು

ತುಂದಿ ಅಣ್ಣಂದಿರಿದ್ದಾರೆ. ನನ್ನ ತಾಯಿಯ ಹೆಸರು ಪ್ರಭಾವತಿಯು. ಈ ಎಲ್ಲ ಸಂಗತಿಗಳನ್ನು ಕೇಳಿ ಅರಸನು ಸಂತುಷ್ಟನಾದನು. ಅವನು ಡಂಗುರ ಸಾರಿದ ಮೇರೆಗೆ ಆವನು ಬೇಡಿದ ದೇಶವನ್ನೂ ಮತ್ತು ತನ್ನ ಕನ್ನಿಕೆಯಾದ ಗುಣವತಿಯನ್ನೂ ಈ ಮೊದಲೇ ಇದ್ದ ಉಳಿದ ಹದಿನೈದು ಸ್ತ್ರೀಯರೊಂದಿಗೆ ಕೊಟ್ಟು ಲಗ್ನ ಮಾಡಿದನು. ಈ ಪ್ರಕಾರ ಅವನು ತನ್ನ ಹದಿನಾರು ಸ್ತ್ರೀಯರ ಸಂಗಡ ಸುಖದಿಂದ ಕಾಲಕಳೆಯಹತ್ತಿದನು. ಆದರೆ ಅವನು ಕೇವಲ ಕಾಮಸೇವೆಯಲ್ಲಿ ಕಾಲವನ್ನೂ ಚಿತ್ತವನ್ನೂ ಕಳೆಯದೆ, ಜಿನಪೂಜನ, ಸತ್ಪಾತ್ರದಾನ, ಸ್ವಾಧ್ಯಾಯ, ತಪ ಮುಂತಾದ ಸತ್ಕರ್ಮ ಗಳನ್ನು ದಿನಾಲು ಉತ್ತಮ ರೀತಿಯಿಂದ ನಡಿಸಹತ್ತಿದನು. ಅವನ ರಾಜ್ಯ ದಲ್ಲಿ ಪ್ರಜೆಗಳು ಸೌಖ್ಯದಿಂದ ಇದ್ದಂತೆ ಇತರ ಯಾವ ರಾಜ್ಯದಲ್ಲಿಯೂ ಇದ್ದಿಲ್ಲ. ಆದ್ದರಿಂದ ಅವನು ಸೌಖ್ಯದಿಂದ ರಾಜ್ಯವಾಳುತ್ತ ಪ್ರಜಾಪಾಲನೆ ಮಾಡಹತ್ತಿದನು. ಅವನು ಜಿನಧರ್ಮದ ಪ್ರಭಾವನೆಯನ್ನೂ ಉಪದೇಶ ವನ್ನೂ ಜನರಿಗೆ ಹೇಳಲಿಕ್ಕೆ ಅತಿ ಆನಂದಗೊಳ್ಳುತ್ತಿದ್ದನು. ಅವನು ರಾಜ್ಯವಾಳಹತ್ತಿದಂದಿನಿಂದ ಅವನ ರಾಜ್ಯದೊಳಗಿನ ಎಷ್ಟೋ ಜನರು ಜಿನಧರ್ಮದ ಮೇಲೆ ಭಕ್ತಿಯನ್ನಿಡಹತ್ತಿದನು. ಈ ಪ್ರಕಾರ ಅವನು ತನ್ನ ಪೂರ್ವ ಜನ್ಮದ ಪುಣ್ಯಬಲದಿಂದ ಯಾವಾಗಲೂ ಸೌಖ್ಯದಿಂದ ರಾಜ್ಯ ವಾಳಹತ್ತಿದನು.

ಇತ್ತ ಉಜ್ಜಯಿನೀ ನಗರದಲ್ಲಿ ಧನಪಾಲ ಸಾವುಕಾರನು ಪುತ್ರ ವಿಯೋಗದಿಂದ ಅತಿ ದುಃಖಿತನಾದನು. ಮತ್ತು ಧನ್ಯಕುಮಾರನು ಹೋದಂದಿನಿಂದ ಅವರ ಮನೆಯೊಳಗಿನ ಭಾಗ್ಯಲಕ್ಷ್ಮಿಯು ಅವರ ಮೇಲೆ ಕೋಪಾಯಮಾನಳಾದ್ದರಿಂದ ಧನಪಾಲ ಸಾವುಕಾರನಿಗೆ ವಿಧಿಲಕ್ಷ್ಮಿ ಗಂಟುಬಿದ್ದು ಮನೆಯೊಳಗಿನ ದ್ರವ್ಯವೆಲ್ಲ ಹಾಳಾಗಿ ಹೋಗಿ ಅವರಿಗೆ ಹೊಟ್ಟೆತುಂಬ ಅನ್ನವಸ್ತ್ರ ಸಹ ಸಿಗದೆ, ಅವರು ದರಿದ್ರರಾಗಿ ಬಹಳ ಕಷ್ಟ ವನ್ನು ಸೋಸಹತ್ತಿದರು. ಈ ಸಂಕಟವನ್ನು ದೂರಮಾಡಿಕೊಳ್ಳಬೇಕೆಂದು ಆಲೋಚಿಸಿ ರಾಜಗೃಹದಲ್ಲಿ ಶಾಲಿಭದ್ರನೆಂಬುವನೋರ್ವ ಧನಿಕನಿದ್ದು ಅವನ ಮನೆಯು ಎಲ್ಲಿದೆ ಎಂದು ದಾರಿಯೊಳಗಿನ ಜನರನ್ನು ಕೇಳಹತ್ತಿ

ದನು. ಇಷ್ಟರಲ್ಲಿ ಧನ್ಯಕುಮಾರನು ತನ್ನ ರಾಜಮಂದಿರದ ಮಹಾಲಿನಲ್ಲಿ ತನ್ನ ನಗರದ ರಮ್ಯವನ್ನು ನೋಡುತ್ತ ಕುಳಿತಿರಲಾಗಿ ತಂದೆಯಾದ ಧನಪಾಲನು ಅವನ ದೃಷ್ಟಿಗೆ ಬೀಳಲಾಗಿ ಧನ್ಯಕುಮಾರನು ಮಹಾಲಿನಿಂದ ತೀವ್ರವೇ ಇಳಿದು ಬಂದು ತಂದೆಯ ಪಾದಕ್ಕೆ ಸಾಷ್ಟಾಂಗವೆರಗಿದನು. ಇದನ್ನು ನೋಡಿ ಸಮೀಪದಲ್ಲಿದ್ದ ಜನರು ಆಶ್ಚರ್ಯಚಕಿತರಾದರು. ಈತನು ರಾಜನಿದ್ದು ದರಿದ್ರನಾದ ಧನಪಾಲನ ಕಾಲಿಗೆ ಯಾಕೆ ಬೀಳುತ್ತಾನೋ ಇದರ ರಹಸ್ಯವು ಏನು ಅದೆಯೋ ಅದು ನಮಗೆ ತಿಳಿಯಲಾರದೆಂದರು ಆಗ್ಗೆ ಧನಪಾಲನು ಆಶ್ಚರ್ಯಚಕಿತನಾಗಿ ನೀವು ಮಹಾರಾಜರೂ ಮತ್ತು ಮನುಷ್ಯ ಶ್ರೇಷ್ಠರೂ ಇದ್ದು ನನ್ನಂಥ ದರಿದ್ರನ ಕಾಲು ಯಾಕೆ ಬೀಳುತ್ತೀರೆಂದು ಕೇಳಲು ಧನ್ಯಕುಮಾರನು ಎದ್ದು ಪ್ರೀತಿಯಿಂದ ತಂದೆಯನ್ನು ಅಪ್ಪಿ ಅಪ್ಪಾ ನಾನು ನಿನ್ನ ಪ್ರೀಯಭಕ್ತ ಮತ್ತು ಪ್ರೀತಿಯ ಕುವರನಾದ ಧನ್ಯಕುಮಾರನು. ಇಂದಿನ ವರೆಗೆ ನಾನು ನಿಮ್ಮ ಸೇವೆಯಿಂದ ದೂರಾಗಿದ್ದೆನು. ಆದರೆ ದೈವಯೋಗವಿದ ದರಿಂದ ಏನೋ ಇಂಥ ಪುಣ್ಯಬಲದಿಂದ ನಮ್ಮ ನಿಮ್ಮ ಭೆಟ್ಟಿಯಾಯಿತು. ಹೀಗೆಂದು ಒಂದು ಕ್ಷಣ ಅತಿ ಪ್ರೇಮಾತಿಶಯ ದುಃಖವಾಗಿ ನಂತರ ತನ್ನ ತಂದೆಯನ್ನು ಅತಿ ವೈಭವದಿಂದ ತನ್ನ ರಾಜಮಂದಿರಕ್ಕೆ ಒಯ್ದು ಅವನಿಗೆ ಉತ್ತಮವಾದ ಅರಿವೆ ಅಂಚಡಿಗಳನ್ನು ಕೊಟ್ಟು ದಿನಾಲು ಸ್ವತಃ ತಂದೆಯ ಚಾಕರಿಯನ್ನು ಮಾಡಹತ್ತಿದನು. ತಾನು ಮನೆಬಿಟ್ಟು ಹೋದನಂತರ ತಾನು ದಾರಿಯಲ್ಲಿ ಎಂಥ ಎಂಥ ಕಷ್ಟಗಳನ್ನು ಸೋಸಿದೆನು, ಮತ್ತು ಯಾವ ರೀತಿ ಇಂಥ ರಾಜ್ಯವನ್ನು ದೊರಕಿಸಿದೆನು ಮುಂತಾದ್ದನ್ನು ತಂದೆಗೆ ಹೇಳಿ ಸಂತೋಷಗೊಳಿಸಿದನು. ಮತ್ತು ಈ ಯಾವತ್ತು ಸಂಪತ್ತಿಯು ನನಗೆ ತಮ್ಮ ಆಶೀರ್ವಾದದಿಂದಲೇ ದೊರಕಿರುವದೇ ಹೊರ್ತು ಅನ್ಯ ಮತ್ಯಾವದರಿಂದಲೂ ಇಲ್ಲ. ಆದರೆ ಮನೆಯಲ್ಲಿ ಅಂಣಂದಿರು ಸೌಖ್ಯದಿಂದಿರುವರೋ ಇಲ್ಲವೋ ಇದು ನನಗೆ ಮೊದಲು ಹೇಳಿರಿ ಎಂದು ತಂದೆಗೆ ಕೇಳಿದನು. ಆಗ್ಗೆ ಧನಪಾಲನು ತಮ್ಮ ದಾರಿದ್ರಾವಸ್ಥೆಯ ಸಂಕಟವನ್ನು ಹೇಳಿದನು. ಅಪ್ಪಾ ಮಗುವೇ ಧನ್ಯಕುಮಾರನೇ ನೀನು ನಮ್ಮನ್ನು ಬಿಟ್ಟು ಶಿಟ್ಟು ಮಾಡಿ ಬಂದಂದಿನಿಂದ ನಾವು ಅತಿ ಬಡವರಾಗಿದ್ದೇವೆ. ಜನರಲ್ಲಿ ನಮಗೆ

ಬಹಳೇ ಸುಮಾರಾಗಿದೆ. ಇಷ್ಟೇ ಅಲ್ಲ, ನಮಗೆ ಹೊಟ್ಟೆತುಂಬ ಕೂಳು, ನೀರು ಅನ್ನವಸ್ತ್ರಗಳು ಸಹ ವೇಳೆಗೆ ದೊರಕುವದಿಲ್ಲಾದ್ದರಿಂದ ನಾನು ಆ ಶಹರವನ್ನು ಬಿಟ್ಟು ಇತ್ತ ಬರಲಾಗಿ ನೀನು ನನಗೆ ಅನಾಯಾಸವಾಗಿ ಮಾರ್ಗದಲ್ಲಿ ಭೆಟ್ಟಿಯಾದಿ. ಆದರೆ ನನಗೆ ತಿಳಿಯುವದೇನಂದರೆ ನೀನೇ ಮನೆಯಲ್ಲಿದ್ದಾಗ ನಾವು ಶ್ರೀಮಂತರಿದ್ದು ಸೌಖ್ಯದಿಂದಿದ್ದೆವು. ನೀನು ಮನೆ ಬಿಟ್ಟು ಹೋದಕೂಡಲೇ ನಮಗೆ ಬಡತನ ಬಂದು ನಾವು ಬಹಳ ಕಷ್ಟವನ್ನು ಸೋಸಿದೆವು. ನೀನೊಬ್ಬನೇ ಪುಣ್ಯವಂತನಿದ್ದು ನಾವು ಬಹಳ ದರಿದ್ರರೂ, ಪಾಪಿಷ್ಠರೂ ಇದ್ದೇವೆ. ಮತ್ತು ನನ್ನ ಅಂಬೋಣವೇನಂದರೆ ನೀನು ಇನ್ನು ಮೇಲೆ ಹಿಂದೆ ನಿನ್ನ ಮೇಲೆ ದ್ವೇಷಮಾಡಿದಂಥಾ ಅಣ್ಣಂದಿರ ಅಪರಾಧವನ್ನು ಕ್ಷಮಿಸಬೇಕೆಂದು ಹೇಳಿದನು. ಇದನ್ನು ಕೇಳಿ ಧನ್ಯಕುಮಾರನು ಅವನನ್ನು ಉಜ್ಜಯನೀ ಪಟ್ಟಣಕ್ಕೆ ಉತ್ತಮವಾದ ವಸ್ತ್ರಾಭರಣಗಳನ್ನು ಕೊಟ್ಟು ಕಳುಹಿ ತಾಯಿ ಅಣ್ಣಂದಿರನ್ನೂ ಕರೆದು ತರಸಿಕೊಂಡು ಅವರಿಗೆ ನಮ್ರಭಾವದಿಂದ ಅಣ್ಣಂದಿರಿರಾ, ಇನ್ನು ಮೇಲೆ ನೀವು ಯಾರ ಮೇಲೆಯೂ ದ್ವೇಷಮಾಡಬೇಡಿರಿ. ದ್ವೇಷಮಾಡುವದರಿಂದ ಅನೇಕ ಸಂಕಟಗಳು ಪ್ರಾಪ್ತವಾಗುವವು ಎಂದು ಹೇಳಿದನು. ಆಗ್ಗೆ ಎಲ್ಲರೂ ನಾಚಿ ತಲೆಬಾಗಿಸಿದರು. ಆ ಮೇಲೆ ಧನ್ಯಕುಮಾರನು ಅವರಿಗೆ ತನ್ನ ಪೂರ್ವಜನ್ಮದ ಕಥೆಯನ್ನು ಹೇಳಿ ಇದರಲ್ಲಿ ನಿಮ್ಮದೇನೂ ತಪ್ಪಿಲ್ಲ. ಇದೆಲ್ಲ ಪೂರ್ವಜನ್ಮದ ಕರ್ಮದ ಫಲವೇ ಎಂದು ಉಸರಿ, ಅವರಿಗೆ ನೀವು ಪಶ್ಚಾತ್ತಾಪಬಡುವ ಕಾರಣವಿಲ್ಲೆಂದನು. ನೀವು ಇಂದಿನಿಂದ ಮನಸಿನೊಳಗಿರುವ ದ್ವೇಷವೆಂಬ ಕಿಲ್ಮಿಷವನ್ನು ಬಿಟ್ಟು ಒಬ್ಬರಿಗೊಬ್ಬರು ಸ್ನೇಹಭಾವದಿಂದ ನಡೆಯುವದಲ್ಲದೆ, ಗುಣವಂತರನ್ನು ನೋಡಿ ಸಂತೋಷಪಡಿರಿ. ದರಿದ್ರರಿಗೆ ಕೈಲಾದಮಟ್ಟಿಗೆ ಉಪಕಾರ ಮಾಡಿರಿ, ಮತ್ತು ಅನ್ಯಧರ್ಮದವರಿಗೂ ದ್ವೇಷಮಾಡದೆ ಮಧ್ಯಸ್ಥರಾಗಿ ನಡಿಯಿರಿ. ಅಂದರೆ ನಿಮಗೆ ಸೌಖ್ಯವಾಗುವದೆಂದು ಹೇಳಿ ಅವರಲ್ಲಿ ಪ್ರತಿಯೊಬ್ಬರಿಗೆ ಒಂದೊಂದು ದೇಶವನ್ನೂ ಅನೇಕ ದ್ರವ್ಯವನ್ನೂ ಕೊಟ್ಟನು. ಇಲ್ಲಿ ಆಚಾರ್ಯರು ಹೇಳುವದೇನಂದರೆ ಓ ಜನರುಗಳಿರಾ! ನೋಡಿರಿ ಧನ್ಯಕುಮಾರನಿಗೆ ರಾಜ್ಯಪದವಿಯು ಸಿಕ್ಕಾಗ್ಯೂ ತಾಯಿ ತಂದೆಗಳ ಪಾಲನ ಪೋಷಣೆ ಮಾಡುವದು

ರಲ್ಲಿ ಹಿಂದುಳಿಯಲಿಲ್ಲ. ಅವನ ಅಂಣಂದಿರು ಅವನಿಗೆ ಎಷ್ಟು ಕಷ್ಟಗಳನ್ನು ಕೊಟ್ಟಾಗ್ಯೂ ಅದನ್ನು ಮನಸ್ಸಿನಲ್ಲಿ ಸ್ವಲ್ಪಾದರೂ ಹಿಡಿಯದೆ ಅವರ ಕಡೆ ಯಿಂದಲೇ ಕ್ಷಮೆಬೇಡಿಕೊಂಡು ಅವರಿಗೆ ರಾಜ್ಯವನ್ನೂ ಧನವನ್ನೂ ಕೊಟ್ಟನು. ಹೀಗಿರುವದರಿಂದ ಪುಣ್ಯಪುರುಷರ ಚರಿತ್ರವನ್ನು ಹೇಳುವದು ಅಸಾಧ್ಯವೇ: ಈ ಪ್ರಕಾರ ಧನ್ಯಕುಮಾರನು ತನ್ನ ತಾಯಿ ತಂದೆ ಏಳು ಮಂದಿ ಅಂಣತಮ್ಮಂದಿರು ಮತ್ತು ಹದಿನಾರು ಹೆಂಡರೊಡನೆ ಸ್ವರ್ಗದೊ ಳಗಿನ ದೇವೇಂದ್ರನಂತೆ ಸೌಖ್ಯದಿಂದ ರಾಜ್ಯವಾಳಹತ್ತಿದನು. ಅವನು ಸೌಖ್ಯವನ್ನು ಪಡೆದದ್ದು ಪೂರ್ವಜನ್ಮದಲ್ಲಿ ಮುನಿಗಳಿಗೆ ಆಹಾರವನ್ನು ಕೊಟ್ಟದ್ದರಿಂದಲ್ಲವೆ ? ಆದುದರಿಂದ ನೀವೂ ಸತ್ಪಾತ್ರಕ್ಕೆ ದಾನಮಾಡುವದ ರಲ್ಲಿ ಉತ್ಕಂಠೆಯುಳ್ಳವರಾಗಿರಿ.

## ೫ ನೆಯ ಪರಿಚ್ಛೇದ.



ಒಂದಾನೊಂದು ದಿವಸ ಧನ್ಯಕುಮಾರನ ಹೆಂಡತಿಯಾದ ಸುಭ ದ್ರಾರಾಣಿಯು ಅತಿ ಖಿನ್ನಳಾಗಿ ವಿಚಾರಮಾಡುತ್ತ ಕುಳಿತಿರುವದನ್ನು ರಾಜನು ಕಂಡು—ಪ್ರಿಯೆ ನಮ್ಮ ಮನೆಯಲ್ಲಿ ಯಾವತರದ ವೈಭವವು ಕಡಮೆಯಿಲ್ಲದೆಯಿದ್ದಾಗ್ಯೂ ಇಷ್ಟು ಯಾಕೆ ಚಿಂತಾತುರಳಾಗಿರುವಿ, ನಿನ್ನ ಮೈಯಲ್ಲಿ ನೆಟ್ಟಗಿಲ್ಲವೇನು ? ಅಥವಾ ಯಾವನಾದರೂ ನಿನ್ನ ಆಜ್ಞಾ ಭಂಗ ಮಾಡಿದನೇನು ? ಅಥವಾ ನಿನ್ನ ಯಾವ ಮನೋರಥವು ಕಡಿಮೆ ಯಾಯಿತು ಹೇಳೆಂದನು. ಆಗ್ಗೆ ಸುಭದ್ರಾರಾಣಿಯು ಅತಿ ದುಃಖಿತ ಳಾಗಿ—‘‘ ಪ್ರಾಣವಲ್ಲಭನೇ ನನ್ನ ಅಣ್ಣನಾದ ಶೀಲಭದ್ರನು ಸಂಸಾರದಲ್ಲಿ

ವಿರಕ್ತನಾಗಿ ಸಂಯಮದ ಅಭ್ಯಾಸವನ್ನು ಮಾಡುತ್ತಿದ್ದಾನೆ. ಅವನು ಸಂಸಾರದೊಳಗಿನ ಯಾವ ಮಾತಿನ ವಿಷಯಕ್ಕೂ ಏನೂ ವಿಚಾರ ಮಾಡದೆ ದಿನಕ್ರಮವಾಗಿ ಯಾವತ್ತು ಭೋಗಸೌಖ್ಯಗಳನ್ನು ಕಡಿಮೆ ಮಾಡಹತ್ತಿದ್ದಾನೆ. ಅವನು ಇನ್ನು ಸ್ವಲ್ಪ ದಿವಸಗಳಲ್ಲಿ ಯತಿ ಆಶ್ರಮ ವನ್ನು ಕೈಕೊಂಡು ತಪೋವನಕ್ಕೆ ಹೋಗತಕ್ಕವನಾಗಿರುವನಾದ್ದರಿಂದ, ನಾನು ಇಷ್ಟು ಚಿಂತಾತುರಳಾಗಿದ್ದೇನೆ" ಎಂದು ಹೇಳಿದಳು. ಆಗ್ಗೆ ಧನ್ಯ ಕುಮಾರನು ಅತಿ ಆನಂದದಿಂದ ಶೀಲಭದ್ರನ ಮನೆಗೆ ಹೋಗಿ—"ನೀನು ಇನ್ನು ಮೇಲೆ ಸಂಸಾರದಲ್ಲಿ ವ್ಯರ್ಥವಾಗಿ ಕಾಲಕಳೆಯಬೇಡ. ಯಾಕಂದರೆ, ಧನಲಕ್ಷ್ಮಿಯು ವೇಶ್ಯಾಸ್ತ್ರೀಯಳಂತೆ ಚಂಚಲ ಇದ್ದು ಬಹಳ ತ್ರಾಸಕೊಡ ತಕ್ಕವಳಿದ್ದಾಳೆ. ಮನುಷ್ಯಜನ್ಮವು ರೋಗಾದಿಗಳಿಂದ ಕೂಡಿ ನೂರಾರು ವಿಘ್ನಗಳಿಂದ ತುಂಬಿಕೊಂಡಿದೆ. ಮಕ್ಕಳು, ಸ್ನೇಹಿತರು, ಹೆಂಡರೇ ಮೊದ ಲಾದ ಸಂಸಾರದೊಳಗಿನ ಬಾಂಧವರು ಸಂಸಾರವೆಂಬ ಘೋರಾರಣ್ಯದಲ್ಲಿ ಕೈ ಕಟ್ಟಿ ಹಾಕತಕ್ಕಂಥ ಹಗ್ಗವುಳ್ಳವರಾಗಿದ್ದಾರೆ. ವಿಷಯ ಸೌಖ್ಯವು ಸಂಸಾರದಲ್ಲಿ ಸರ್ಪದಂತೆ ಒಂದು ಕ್ಷಣದಲ್ಲೇ ಜೀವ ತೆಗೆದುಕೊಳ್ಳುವಂಥಾ ದ್ದದೆ. ಹೀಗಿರುವದರಿಂದ ಈ ಸಂಸಾರದಲ್ಲಿ ಯಾವ ತರದ ಸೌಖ್ಯವೂ ಇಲ್ಲ. ಕಾಳವೆಂಬ ರಾಕ್ಷಸನು ನಮ್ಮನ್ನು ನಾಶಪಡಿಸುವವರೆಗೆ ನಾವು ಧರ್ಮಸಾಧನೆಯನ್ನು ಮಾಡತಕ್ಕದ್ದು. ಅಂದರೆ ನಾವು ಹಗಲೆಲ್ಲ ಮೃತ್ಯು ವಿನ ಬಾಯೊಳಗೆ ಸಿಗಲಿಕ್ಕಿಲ್ಲ." ಹೀಗೆ ಅವನಿಗೆ ಉಪದೇಶಮಾಡಿ ವಿಪು ಲಾಚಲ ಪರ್ವತದಲ್ಲಿ ಶ್ರೀಮಹಾವೀರ ಸ್ವಾಮಿಯವರ ಸಮವಸರಣವು ಬಂದದ್ದರಿಂದ ಆತನನ್ನು ಅಲ್ಲಿಗೆ ಕರೆಯೊಯ್ದನು. ಅಲ್ಲಿ ಹನ್ನೆರಡು ತರದ ಸಭೆಯ ಮಧ್ಯಭಾಗದಲ್ಲಿ ಸ್ವರ್ಗಲೋಕದ ದೇವೇಂದ್ರಾದಿ ಸುರರಿಂದ ವಂದಿ ತವಾದ ಸುವರ್ಣಮಯ ಸಿಂಹಾಸನದ ಮೇಲೆ, ಅಶೋಕವೃಕ್ಷವೇ ಮೊದ ಲಾಗಿ ಎಂಟು ಪ್ರತಿಹಾರ್ಯ ಕೇವಲ ಜ್ಞಾನವುಳ್ಳವರಾಗಿ ಕುಳಿತಿದ್ದರು. ಅಲ್ಲಿ ಅವರಿಬ್ಬರೂ ಮೂರು ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡಿ ಸ್ತುತಿ

ಯನ್ನು ಮಾಡುವ ಸಲುವಾಗಿ ಅವರೆದುರಿಗೆ ಕೈ ಮುಗಿದುಕೊಂಡು ನಿಂತರು. ಜಿನೇಶ್ವರನೇ, ನೀನು ಈ ಜಗತ್ತಿನ ಸ್ವಾಮಿಯಾಗಿರುವಿ, ಕಾರಣ ಹೊರ್ತು ಯಾವತ್ತೂ ಜಗತ್ತಿನ ಬಾಂಧವನಾಗಿರುವಿ. ನಿನ್ನ ಗುಣವು ಮಹಾ ಸಮುದ್ರದಂತೆ ಅಪಾರವಾಗಿರುವದು. ನಿನ್ನ ಗುಣವರ್ಣನೆ ಯಾರಿಂದಲೂ ಆಗದು. ಸರ್ವ ಜಗತ್ತಿನಲ್ಲಿ ಮಂಗಲನಾಯಕನಾಗಿರುವಂಥ ನೀನೊಬ್ಬನೇ ಪುಣ್ಯನಿಧಿಯು. ನಿನ್ನ ನಾಮಸ್ಮರಣೆಯಿಂದ ಈ ಜಗತ್ತಿನೊಳಗಿನ ಎಲ್ಲ ಸಂಕಟಗಳು ದೂರಾಗುತ್ತವೆ. ಜಗದರಕ್ಷಕನೇ, ನಾವು ಈ ಸಂಸಾರಸಾಗರದಲ್ಲಿ ಸಿಕ್ಕು ಅನೇಕ ಕಷ್ಟಗಳನ್ನನುಭೋಗಿಸಿದೆವು. ಈ ದುಃಖವು ನಮಗೆ ಇನ್ನು ಮೇಲೆ ಬರದಂತೆ ಮಾಡಬೇಕೆಂಬುವವೇ ನಮ್ಮ ಇಚ್ಛೆಯು. ” ಹೀಗೆಂದು ಅವರು ತೀರ್ಥಂಕರರ ಪಾದಕಮಲದಲ್ಲಿ ಜಿನ ದೀಕ್ಷೆಯನ್ನು ತೆಗೆದುಕೊಂಡರು. ಇದನ್ನು ನೋಡಿ ಧನ್ಯಕುಮಾರನ ತಂದೆಯಾದ ಧನಪಾಲನೂ, ತಾಯಿಯಾದ ಪ್ರಭಾವತೀದೇವಿಯೂ, ಏಳು ಜನ ಅಣ್ಣಂದಿರೂ ಮೊದಲಾದವರು ಜಿನದೀಕ್ಷೆಯನ್ನು ತೆಗೆದುಕೊಂಡು ಒಂದೇ ಪರ್ವತದಲ್ಲಿದ್ದು ಹನ್ನೆರಡು ತರದ ತಪಗಳನ್ನು ಮಾಡುತ್ತ ಕರ್ಮ ಕ್ಷಯ ಮಾಡಹತ್ತಿದರು. ಧನ್ಯಕುಮಾರ ಮುನಿಯು ದರ್ಶನ, ಜ್ಞಾನ, ಚಾರಿತ್ರ, ತಪ, ಈ ನಾಲ್ಕು ತಪಗಳನ್ನು ಮಾಡಿ ಸಮಾಧಿಮರಣವನ್ನು ಸಾಧಿಸಿ ಸರ್ವಾರ್ಥಸಿದ್ಧಿಯನ್ನು ಪಡೆದನು. ಅಲ್ಲಿ ಹುಟ್ಟತಕ್ಕಂಥವರಿಗೆ ಗರ್ಭ ಮತ್ತು ಶೈಶವಾಸ್ಥೆಯು ಇಲ್ಲ, ಅವರು ಒಮ್ಮಿಗೇನೆ ಉಪಪಾದ ಶಿಲೆಯ ಮೇಲೆ ಜನಿಸಿ ಯೌವನಾವಸ್ಥೆಯನ್ನು ಹೊಂದಿ, ಒಂದು ಗಜಪ್ರಮಾಣ ಆಳಾಗುವರು. ಅಲ್ಲಿಯ ವಯೋವಧಿಯು ಮುವತ್ತೂರು ಸಾವಿರ ವರ್ಷವಿದ್ದು ಅಷ್ಟರಲ್ಲಿ ಒಂದೇ ಮಾನಸಾಹಾರವೇ ಆಗಿರುವದು. ಅಲ್ಲಿಯವರಿಗೆ ಅವಧಿಜ್ಞಾನ ಬರುವದರಿಂದ ಅವರಿಗೆ ತಮ್ಮ ಪೂರ್ವಾಪರ ಜನ್ಮದ ಸಂಗತಿಯು ಗೊತ್ತಿರುತ್ತದೆ. ಸರ್ವಾರ್ಥಸಿದ್ಧಿಯಲ್ಲಿ ಜನಿಸಿದಂಥ ಜೀವವು ಎರಡನೇ ಭವದಲ್ಲಿ ಮೋಕ್ಷವನ್ನು ಹೊಂದುವದೆಂದು ಜಿನೋಕ್ತಿಯದೆ. ಇಲ್ಲಿ

ಇದ್ದಂಥ ಧನ್ಯಕುಮಾರನ ಜೀವವು ಅಹಮೀಂದ್ರ ಪದವಿಯೊಳಗಿನ ಎಲ್ಲ ಸೌಖ್ಯಗಳನ್ನು ಅನುಭೋಗಿಸಿ ಮುವತ್ಮೂರು ಸಾವಿರ ವರ್ಷಗಳು ತೀರಿದ ಮೇಲೆ ಅಲ್ಲಿಂದ ತಿರುಗಿ ಭೂಲೋಕದಲ್ಲಿ ಉತ್ತಮ ಕುಲದಲ್ಲಿ ಜನ್ಮವನ್ನು ಹೊಂದುವದು. ಮತ್ತು ಆ ಭವವಲ್ಲಿ ಅನೇಕ ತರದ ಸೌಖ್ಯವನ್ನು ಅನುಭೋಗಿಸಿ ಕಡೆಗೆ ತನ್ನ ತಪೋಬಲದಿಂದ ತ್ರೈಲೋಕ್ಯ ಚೂಡಾಮಣಿ ಪದವಿಯನ್ನು ಹೊಂದಿ, ಸಿದ್ಧ ಪರಮೇಷ್ಠಿಯಾಗುವರು. ಅಲ್ಲಿ ಅನಂತಾನಂತ ಕಾಲ, ಮೋಕ್ಷಸೌಖ್ಯವನ್ನು ಅನುಭವಿಸುವದು. ಆ ಮೋಕ್ಷಸೌಖ್ಯವು ಯಾವ ತರದ್ದು ಇರುತ್ತದೆಂದು ಹೇಳುವ ಅವಕಾಶ ಇಲ್ಲಿ ಇಲ್ಲ; ಈಗ ಧನ್ಯಕುಮಾರನು ಸರ್ವಾರ್ಥ ಸಿದ್ಧಿಯಲ್ಲಿ ಇರುವನು. ಅವನು ಮುಂಬೆ ಮೋಕ್ಷವನ್ನು ಹೊಂದುವನು. ಇಷ್ಟೊಂದು ಹೇಳಿ ಧನ್ಯಕುಮಾರ ಮುನಿಗೆ ಮೂರಾವರ್ತಿ ಮನಃಶುದ್ಧಿಯಿಂದ ವಂದಿಸಿ ಈ ಕಥೆಯನ್ನು ಮುಗಿಸುತ್ತೇನೆ.



# ಚಕ್ರಿ ವಜ್ರನಾಭಿಯ
# ವೈರಾಗ್ಯ ಭಾವನೆ.

ಬೀಜಸರ್ವಕ್ಷಣನರಾ | ಕೃಷಿಕರ್ಮಸುಖಭೋಗಸಂಸಾರಾ ||
ಚಕ್ರಿ ಚಿತ್ತಾನಂದಮನಪೂರಾ | ಧರ್ಮಧ್ಯಾನ ಸುಖಸಾಗರಾ ||
ರಾಜಾಭೋಗಾನೇಕಪ್ರಕಾರಾ | ನಿಮಗ್ನ ನಿರಂತರಾ ||
ಭವಕಾಲಕಾಲಗಮನಾ | ಭೋಗನಿಮಗ್ನ ಯಚ್ಚರಿಲ್ಲಮನಾ || ೧ |
ಅಕಸ್ಮಾತ ಕಾಲಲಬ್ಧಿ ಪೂರಾ | ಮುನಿದೃಷ್ಟಿಗೋಚರಾ ||
ಶ್ರೀಗುರು ಕ್ಷೇಮಂಕರಾ | ದರ್ಶನಾನಂದ ಮನಪೂರಾ ||
ಆನಂದಾನಂದ ಮನಾ | ಶುಭಧ್ಯಾನ ಮನಭಾವನಾ ||
ಮಾಡಿ ಮೂರು ಪ್ರದಕ್ಷಿಣಾ | ಪಾದಪದ್ಮ ವಂದನಾ || ೨ ||
ಪೂಜಾ ಸ್ತುತಿಸ್ತೋತ್ರಸ್ತವನಾ | ಪಠಣ ಗುಣಗಾಯನಾ ||
ಗುರುಸನ್ನಿಧ ಆಸನಾ | ನಮೃತ ವಿನಯಭಾವನಾ ||
ಮುನಿ ಉಪದೇಶ ಶ್ರವಣಾ | ವೈರಾಗ್ಯಭಾವ ಭಾವನಾ ||
ರಾಜಾ ಆಶ್ಚರ್ಯ ಧನಾ | ಸ್ತ್ರೀಪರಿವಾರ ನರಕಸದನಾ || ೩ ||
ಗುರು ಉಪದೇಶದ್ವಾರಾ | ಜ್ಞಾನಪ್ರಕಾಶ ಭಾಸ್ಕರಾ ||
ಭ್ರಮಭಾವತ್ಯಾಗ ಪೂರಾ | ಮೋಹಾಂಧಕಾರ ದೂರಾ ||
ಸಂಪತ್ತಿಯೌವ್ವನ ಶರೀರಾ | ಭೋಗ ದುಃಖ ಸಂಸಾರಾ ||
ಧರ್ಮಾನುರಾಗ ಮನಪೂರಾ | ಪ್ರೇಮದೃಢಚಿತ್ತಮನಸ್ಥಿರಾ || ೪ ||
ಜನನಮರಣಜರಾ | ಘೋರ ದುಃಖ ಸಂಸಾರಾ ||
ನರಕನಿಗೋದದ್ವಾರಾ | ದುಃಖಾನಂತ ಅಪಾರಾ ||
ಪಶುಪರ್ಯಾಯ ದುಃಖಾಪಾರಾ | ಭವಬಂಧನ ಅಘೋರಾ ||
ಸ್ವರ್ಗಸುರಾವತಾರಾ | ಪರವೈಭವದೃಷ್ಟಿ ದುಃಖಾಪಾರಾ || ೫ ||

ಮನುಷ್ಯಜನ್ಮ ಶರೀರಾ । ದುಃಖಾನೇಕ ವಿಪತ್ತಿವ್ಯಾಧಿಪೂರಾ ॥
ಇಷ್ಟವಿಯೋಗೆಪರಿವಾರಾ । ಅನಿಷ್ಟಯೋಗೆ ದುಃಖಘೋರಾ ॥
ದುಃಖಿಷ್ಟ ದೀನ ದರಿದ್ರಾ । ನರತನುರೋಗೆ ಕಷ್ಟಾಪಾರಾ ॥
ದಾರಿಗೇ ಸ್ತ್ರೀ ದುರಾಚಾರಾ । ಬಂಧುವೈರಿ ಪರಿವಾರಾ ॥ ೬ ।
ದಾರಿಗೇ ಪುತ್ರ ಇಚ್ಛಾನರಾ । ಸಂತತಿದುಃಖ ನಿರಂತರಾ ॥
ಪುತ್ರಾಗಿ ವೃತ್ತ್ಯಾದರೆ । ಆ ದುಃಖಕಿಲ್ಲಾ ಪಾರಾವಾರಾ ॥
ಧನಸಂಪತ್ತಿ ನಷ್ಟಾದರೆ । ಘೋರದುಃಖ ಘನಘೋರಾ ॥
ದುಃಖಘೋರಾ ಸೌಖ್ಯಿಲ್ಲ ಚೂರಾ । ಜೀವಕ್ಕ ನಿರಂತರಾ ॥ ೭ ।
ಪುಣ್ಯೋದಯ ಸೌಖ್ಯಿಲ್ಲನರಾ । ದುಃಖ ಸಂಸಾರಾಪ್ತ ಚೂರಾ ॥
ಈ ಜಗಜ್ಜೀವ ಸರ್ವನರಾ । ದುಃಖಿಷ್ಟ ಸಂಸಾರಾ ॥
ಭೋಗಸುಖಸಂಸಾರಾ । ಇದರಲ್ಲಿದ್ದರೆ ಸಾರಾ ॥
ತ್ಯಾಗ್ಯಾಕೆ ತೀರ್ಥಂಕರಾ । ದೂರ ಮಾಡುವರು ತಿರಸ್ಕಾರಾ ॥೮।
ಮೋಕ್ಷಸಾಧನೆ ತಪಾಚಾರಾ । ಯಾಕೆ ಕಷ್ಟಗಿರಿಕಂದರಾ ॥
ತಪಸಂಯಮಚಾರಿತ್ರಾ । ದಿಂದ ಮುಕ್ತಿಸ್ತ್ರೀಮಂದಿರಾ ॥
ಪುದ್ಗಲ ಅಶುಚಿ ಅಪವಿತ್ರಾ । ಘಾಣಿಶರೀರ ಮಲಮೂತ್ರಾ ॥
ಸಾಗರಸ್ನಾನ ಅಹೋರಾತ್ರಾ । ಆಗುವದಿಲ್ಲ ಪವಿತ್ರಾ ॥ ೯ ॥
ಸಪ್ತಧಾತುಮಲಮೋಚನಾ । ನರಶರೀರಮಲೀನಾ ॥
ಅಂತರಂಗೆಘಾಣಾ । ದುರ್ಗಂಧ ಚರ್ಮ ಆಚ್ಛಾದನಾ ॥
ದಿನಂಪ್ರತಿ ನಿಸಿದಿನಾ । ಮಲಶ್ರವ ನೌದ್ವಾರ ಮಲೀನಾ ॥
ವ್ಯಾಧಿಉಪಾಧಿರೋಗವೇದನಾ। ಸದಾದುಃಖಿಷ್ಟದುರ್ಧ್ಯಾನಾ ॥೧೦॥
ಅನೇಕ ಪ್ರಕಾರ ಪೋಷಣಾ । ಪುಷ್ಟಶರೀರ ಕಷ್ಟಪ್ರಾಣಾ ॥
ಸುಖಸೌಖ್ಯ ತನುಪೋಷಣಾ । ವ್ರತಚಾರಿತ್ರತಪ ಕಠೀಣಾ ॥
ಶರೀರ ಸ್ವಭಾವದುರ್ಜನಾ । ದುಃಖ ಕೊಡುವದು ಗಹನಾ ॥
ಪುದ್ಗಲ ಮಮತ್ವಸರ್ವಕ್ಷಣಾ । ನಠಮೂಢಮೂರ್ಖಪ್ರಾಣಾ ।೧೧।

ಈ ಶರೀರ ಅಯೋಗ್ಯ ಪೋಷಣಾ | ಪುಷ್ಟಮಾಡುವದುಸರ್ವಕ್ಷಣಾ ||
ಕಷ್ಟಕೊಡುವದು ಯೋಗ್ಯಷೋಷಣಾ | ಅಪವಿತ್ರಪುದ್ಗಲಕ್ಷೀಣಾ ||
ಜಗಜ್ಜೀವಶರೀರಸರ್ವಕ್ಷಣಾ | ಭೋಗವಿಲಾಸ ರೋಗಕರೀಣಾ ||
ಕರ್ಮವಿಪಾಕವೃದ್ಧಿಧರ್ಮಾ | ಪ್ರಾಪ್ತಮುಕ್ತಿಸ್ತ್ರೀಧಾಮಾ ||೧೨||
ಚಂಚಲವೇಶ್ಯಾಸ್ತ್ರೀಸಮಾ | ಲಕ್ಷ್ಮೀ ಅಸ್ಥಿರ ಧನಧಾಮಾ ||
ಮೋಕ್ಷರಿಪುವೈರಿಕರ್ಮಾ | ಸದಾ ದುಃಖದುರ್ಗತಿಧಾಮಾ ||
ಗೃಹ ಬಂಧಿಗೃಹಸಮಾ | ಬೇಡಿ ಪರಿವಾರ ಪುತ್ರನಾಮಾ ||
ರಾಜ್ಯೈಶ್ವರ್ಯ ಧನಧಾಮಾ | ಸಂಪತ್ತಿ ಸರ್ವಸ್ವಪ್ನಸಮಾ ||೧೩||
ವಿಷಯಕಷಾಯ ದುರ್ಜನಾ | ದುಃಖ ವಜ್ರಾಗ್ನಿಸಮಾನಾ ||
ಸುಮಾರ್ಗ ಭ್ರಷ್ಟಮನಾ | ಕುಮಾರ್ಗ ದುರ್ಗತಿ ಸದನಾ ||
ಮೋಹ ಉದಯ ಜೀವಾಜ್ಞಾನಾ | ದುರ್ಧ್ಯಾನ ದುಃಖಗಹನಾ ||
ಭಕ್ಷದತ್ತುರಾ ದುಷ್ಟ ದುರ್ಜನಾ | ದೃಷ್ಟಿ ಸರ್ವಕಂಚನಾ || ೧೪ ||
ಸರ್ವ ಸಂಪತ್ತಿಸದನಾ | ಪ್ರಾಪ್ತ ವಿಲಾಸ ಮನಮೋಹನಾ ||
ತೃಪ್ತಿಗಲಿಲ್ಲ ತೃಷಾತೂರ ಮನಾ | ಜೀವ ಮೂಢಮತಿಹೀನಾ ||
ಷಟ್ಖಂಡ ಪೃಥ್ವಿಸಾಧನಾ | ಭೋಗಸಂಪತ್ತಿ ಭೋಗಿಸಿದೆನಾ ||
ತೃಪ್ತಿಗಲಿಲ್ಲ ಜೀವಮೂಢಮನಾ| ತೃಷ್ಣಾಲೋಭ ಅತಿಗಹನಾ|೧೫|
ಸಮ್ಯಕ್‌ಚಾರಿತ್ರಜ್ಞಾನಾ | ಈ ಜೀವಕ್ಕ ಮುಕ್ತಿಸದನಾ ||
ಇದರ್ಹೊರ್ತಿಲ್ಲ ಸಾಧನಾ | ಸಂಸಾರಪಾರ ಪ್ರಯತ್ನಾ ||
ನೌನಿಧಿ ಧನದ್ರವ ತಾ ಗ | ತೃಣಸಮ ಚೌದಾರತ್ನತ್ಯಾಗ ||
ಕೋಟ್ಯಶರಾ ಅಶ್ವತ್ಯಾಗ | ಚೌರ್‍ಯಾಂಸಿ ಲಕ್ಷ ಗಜತ್ಯಾಗ || ೧೬ ||
ಇಷ್ಟೆಲ್ಲಾಸಂಪತ್ತಿಧನಧಾಮಾ|ತ್ಯಾಗಐಶ್ವರ್ಯಜೀರ್ಣತೃಣಸಮಾ||
ನೀತಿವಿಚಾರ ಜ್ಞಾನಮನಾ | ಪೌತ್ರರಾಜ ಸಿಂಹಾಸನಾ ||
ನಿಸ್ಪೃಹ ನಿಶಲ್ಯ ನಿಸ್ಸಂಗ | ಬಹು ರಾಜಸಹಸ್ರಸಂಗ ||
ತ್ಯಾಗ ವಸ್ತ್ರಾಭರಣಾ | ಮಹಾರಾಜ ಜ್ಞಾನಪೂರ್ಣಾ || ೧೭ ||

ಧೃಷ್ಟಿ ಶ್ರೀಗುರುಚರಣಾ । ಪಂಚಮಹಾವ್ರತಧಾರಣಾ ||
ಧನ್ಯ ಧನ್ಯ ಮಹಾರಾಜಾ । ಧನ್ಯ ಧರ್ಮಧ್ಯಾನ ಆತ್ಮಕಾಜಾ ||
ತ್ಯಾಗೆ ಕೂಮತಿಕೂಜ್ಞಾನಾ । ಸೂಮತಿ ಸುಗತಿ ಸಾಧನಾ ||
ಇಂಥಾ ಸಂಪತ್ತಿತ್ಯಾಗತೃಣಸಮಾ । ಅಂಥಾ ಮಹಾತ್ಮಾ ಪಾದ
ಹಿರಾವಂದನಾ || ೧೮ ||

# ಅಧ್ಯಾತ್ಮಸ್ತೋತ್ರ.

ಅಷ್ಟಕರ್ಮಬಂಧನೆಜೀವಾ । ಭವಭ್ರಮಣ ಪ್ರಾಣಸದೈವಾ ||
ಕರ್ಮದೂರಆತ್ಮಾಹಿತಜ್ಞಾನಾ । ನಮೋಸಿದ್ಧಶಿವಸುಖಸಾಧನಾ||೧
ಜಗಜ್ಜೀವ ಚೌಗತಿ ಭ್ರಮಣಾ । ಸದಾ ಜನ್ಮಜರಾ ಮರಣಾ ||
ಮುಕ್ತ ಜೀವ ತ್ರಿಕಾಲಜ್ಞಾನಾ । ಅಜರಾಮರಚೇತನಾ || ೨ ||
ಮೋಕ್ಷಹೊಂದಿದ ಜೀವಪ್ರಾಣಾ । ತ್ಯಾಗೆ ಪೃಥ್ವೀ ಭವಭ್ರಮಣಾ||
ಜಗಜ್ಜೀವ ನಷ್ಟಕರ್ಮಾ । ಕರ್ಮನಷ್ಟ ಮುಕ್ತಿಧಾಮಾ || ೩ ||
ಕರ್ಮೋದಯು ಪೂರ್ವಿಪ್ರಾಣಾ । ಜೀವಜನ್ಮ ಜರಾಮರಣಾ ||
ಹ್ಯಾಗೆ ಮದಿರಾ ಮದ್ಯಪಾನಾ । ಜೀವಭವಭ್ರಮಣಗಹನಾ ||೪||
ಕರ್ಮಾಷ್ಟ ಬಂಧ ಬಂಧನಾ । ಜೀವ ದುಃಖಿಷ್ಟ ಗಹನಾ ||
ಪುದ್ಗಲ ಅಚೇತ ಚೇತನಾ । ಗಾತ್ರಧೂಳಿ ಮಲಲೇಪನಾ || ೫ ||
ಕರ್ಮೋದಯುಜ್ಞಾನಹೀನಜೀವಾ। ದುಃಖಿಷ್ಟಜನ್ಮಮರಣಸದೈವಾ||
ಜೀವಕರ್ಮಬಂಧನಾ । ಪ್ರಾಣ ಸಂಸಾರ ಭ್ರಮಣಾ || ೬ ||
ಶುಭಭಾವನಾ ಪುಣ್ಯಬಂಧಾ । ಅಶುಭಭಾವ ಪಾಪಬಂಧಾ ||
ದ್ವಯುಭಾವ ಬಂಧತ್ಯಾಗಾ । ಜೀವಕ್ಕ ಮುಕ್ತಿ ಸ್ತ್ರೀ ಸಂಗಾ ||೭||
ಆದ್ಯನಾದಿ ಕರ್ಮಚೇತನಾ । ಪಾವಕ ಕಾಷ್ಟ ಸಾಮಾನಾ ||
ಕ್ಷೀರನೀರ ಯುಳ್ಳಯಣ್ಣಿ ! ಸುವರ್ಣ ಪಾಷಾಣ ಖಣಿ || ೮ ||

ವರ್ಣ ಕೆಂಪ ಬಂದನಾ | ಭಾನು ಅಭ್ರ ಆಚ್ಛಾದನಾ ||
ಸಿಂಹಬಂದೀಖಾನಿ ಬಂಧನಾ | ಶಕ್ತಿಹೀನಸಾಮರ್ಥ್ಯ ಬಲತನಾ |೯|
ನೀರಿಂದ ಶೀತಲ ಅಗ್ನಿ | ನೀರಿಗೇ ಧಹನ ಅಗ್ನಿ ||
ಶರೀರಾಸ್ಪದ ಕಷ್ಟ ಚೈತನಾ | ಆತ್ಮಹಿತ ಇಲ್ಲ ಜ್ಞಾನಾ || ೧೦ ||
ಪ್ರಾಣತ್ಯಾಗ ಪುದ್ಗಲಾಸ್ಪದ ಭಾವಾ | ಅಂತರಂಗತ್ಯಾಗಿಲ್ಲ ಜೀವಾ ||
ಧ್ಯಾನಾಗ್ನಿದಗ್ಧ ಆತ್ಮತನಾ | ಅಲ್ಲಿಂದ ಮುಕ್ತಿಸಾಧನಾ || ೧೧ ||
ರಾಗದ್ವೇಷ ಆತ್ಮಸಂಗಾ | ಜೀವಾತ್ಮಾಜ್ಞಾನ ಭಂಗಾ ||
ಜ್ಞಾನದಿಂದ ಶಿವಸಾಧನಾ | ಮತ್ತೊಂದಿಲ್ಲ ಪ್ರಯತ್ನಾ || ೧೨ ||
ಧನವಾನ ನರ ಕೃಪಣಾ | ಧನ ಆಚ್ಛಾದನ ಗೃಹಪೂರ್ಣಾ ||
ಉದರಾಗ್ನಿ ಜೀವಪೋಷಣ | ಪರಗೃಹ ಗೃಹ ಭಿಕ್ಷಾಟಣ || ೧೩ ||
ಪರನರಾ ತಿಳಿಸಿದಾ ಜ್ಞಾನಾ | ನಿನ್ನಲ್ಲಿ ಸಂಪೂರ್ಣ ಧನಾ ||
ಯಾಕೆ ಬೇಡುವಿ ಭಿಕ್ಷಾ ನೀನಾ | ಮೂಢಮೂರ್ಖಮತಿಹೀನಾ ||೧೪||
ಪರೋಪದೇಶ ಶ್ರುವಣಾ | ಶೋಧಿಸಿ ನೋಡೀದ ಗೃಹಹಣಾ ||
ದೃಷ್ಟಿಹಣ ಆನಂದಮುನಾ | ತ್ಯಾಗ ಪರಗೃಹಭಿಕ್ಷಾಟಣಾ || ೧೫ ||
ಪರೋಪದೇಶ ಶ್ರುವಣಜ್ಞಾನಾ | ಹರ್ಷ ಆನಂದನಂದಮುನಾ ||
ಅಲ್ಲಿಂದ ಜ್ಞಾನಸಂಪೂರ್ಣಾ | ಆತ್ಮಹಿತ ಮೋಕ್ಷಸಾಧನಾ ||೧೬||
ಆದ್ಯನಾದೀ ಜೀವಜ್ಞಾನಹೀನಾ | ಪರ್ಯಾಯ ಮಮತ್ವ
ಮೂಢಜ್ಞಾನಾ ||
ನರ್ಕನಿಗೋದ ಪಶುತನಾ | ದುಃಖಾನೇಕ ಛೇದನ ಭೇದನಾ ||೧೭||
ಸದ್ಗುರು ಉಪದೇಶ ಜ್ಞಾನಾ | ಆತ್ಮಹಿತ ಜೀವ ಚೈತನಾ ||
ನಿಶ್ಚಯ ಸಮ್ಯಕ್ತ್ವಜ್ಞಾನಾ | ಜೀನಸೌಖ್ಯ ಮುಕ್ತಿಸಾಧನಾ ||೧೮||
ಕಾಲಲಬ್ಧಿ ಜ್ಞಾನ ಪ್ರಾಪ್ತಪೂರಾ | ಅಲ್ಲಿಂದ ಸೌಖ್ಯ ಸುಖಾಪಾರಾ||
ತ್ಯಾಗೆ ಜೀವ ಸಂಸಾರಾ | ಪಾಪಪುಣ್ಯ ದೂರ ಸೌಖ್ಯಾಪಾರಾ||೧೯||

ಪಾಪ ಅನ್ನುವದು ಪಾಪಕ್ಕ | ಸಂಸಾರ ಸದಾ ಜೀವಕ್ಕ ||
ಪಾಪ ಅನ್ನುವದುಪುಣ್ಯಕ್ಕನೀನಾ | ಕ್ವಚಿತನಿಕ್ಕೊಚಿತಸ್ಥಾನಾ||೨೦||

ಬಂದಿಗೃಹಬಂಧನಜೀವಾ | ಜನ್ಮಮರಣ ದುಃಖಭವಭವಾ ||
ವಿನಾಪ್ರಯತ್ನ ಈಜೀವಾ | ಅತಿದುಃಖಿಷ್ಟ ದುಃಖಸದೈವಾ || ೨೧||

ಜ್ಞಾನಪೂರ್ಣ ವಿರಕ್ತಭಾವಾ | ಕರ್ಮನಿರ್ಜರಾ ನಿರ್ಮಳವುನಾ ||
ಅನಂತಸೌಖ್ಯ ಸದೈವಾ | ವಿಮಲ ನಿರ್ಮಳಜೀವಾ || ೨೨ ||

ಜ್ಞಾನಪವನ ತಪ ಅಗ್ನಿವಿನಾ | ದಗ್ಧಾಗುವದಿಲ್ಲ ಕರ್ಮಬನಾ ||
ಕೋಟಿವರ್ಷತಪಧ್ಯಾನಾ | ಸುದ್ಧಾಗುವದಿಲ್ಲ ಜೀವನೀನಾ || ೨೩ ||
ದ್ರವ್ಯಕರ್ಮನೌಕರ್ಮತನಾ | ಭಾವಕರ್ಮ ಭಿನ್ನಜೀವನೀನಾ ||
ವಿಕಲ್ಪಮನತ್ಯಾಗಜ್ಞಾನಾ | ಸುಬುದ್ಧಿ ಚೈತನ್ಯನೀನಾ || ೨೪ ||
ನಾಲ್ಕು ಗತಿತ್ಯಾಗ ಸಿದ್ಧಾತ್ಮಾ | ಗತಿನಾಲ್ಕುಭ್ರಮಣ ಜೀವಾತ್ಮಾ||
ನಾಲ್ಕು ಕರ್ಮನಷ್ಟಮೋಕ್ಷಧಾಮಾ| ಸೌಖ್ಯಾನಂತಪರಮಾತ್ಮಾ೨೫
ಮುಕ್ತಾದ ಜೀವ ಜ್ಞಾನಪೂರ್ಣಾ| ತ್ಯಾಗಪರ ಪರ್ಯಾಯ
ಜನ್ಮಮರ್ಣಾ ||
ಧ್ಯಾನಾಗ್ನಿವಿನಕರ್ಮಬನಾ | ದಗ್ಧಾಗದೇ ಮುಕ್ತಇಲ್ಲನೀನಾ ||೨೬||
ದರ್ಪಣಂತ್ಯಜಲ ಅಸ್ಥಿರಾ | ಕಾಣುವದಿಲ್ಲ ದೃಷ್ಟಿಗೋಚರಾ ||
ಮನನಿರ್ಮಳ ಸ್ಥಿರವಿನಾ | ಇಲ್ಲಾತ್ಮಾ ಹಿತಜೀವನೀನಾ || ೨೭ ||
ಆದಿನಾಥಕೇವಲಜ್ಞಾನಾ | ಸಹಸ್ರವರ್ಷ ತಪಕಠೀಣಾ ||
ಭರತಭೂಪತ್ಯಾಗಸದನಾ| ಮುಹೂರ್ತಂತರ ಕೇವಲಜ್ಞಾನಾ |೨೮|
ಸಂಕಲ್ಪ ವಿಕಲ್ಪಮನಾ | ರಾಗದ್ವೇಷ ಮೋಹಭಾವನಾ ||
ದ್ವಯಿತಭಾವ ತ್ಯಾಗಮನಾ | ಸುಖ ಸೌಖ್ಯ ಮೋಕ್ಷಸದನಾ |೨೯|
ರಾಗವಿರಾಗದ್ವಿವಿಧಭಾವ | ದ್ವಿವಿಧಭಾವ ಪರ್ಯಯಜೀವ ||
ರಾಗಭಾವ ಪೃಥ್ವೀಪತನಾ | ವೈರಾಗಿ ಶಿವಸದನಾ || ೩೦ ||

ಶನವ್ಮೃಗೆಪಶುಭಾವಪ್ರಾಣಾ | ತೃಣಭಕ್ಷತನುಪೋಷಣಾ ||
ಾವಮಾರ್ಜರಾ ಮನಧ್ಯಾನಾ| ಹಿಂಸಾಸದಾಮನಾಜ್ಞಾನಾ |೩೧|
ಸ್ವಯಿತಭಾವಭವ್ಯಜೀವ| ದೃಷ್ಟಿಗೋಚರಸದೈವ ||
ಇಚ್ಛಾ ಇಲ್ಲಾ ಜೀವಪಾಪಕರ್ಮಾ | ತ್ಯಾಗಭಾವಜೀವಜನ್ಮ
ಮುಕ್ತಿಧಾಮಾ || ೩೨ ||

ಜಗೆ ಅನಂತ ಅನಾದೀ | ಮೋಕ್ಷ ಅನಂತ ಅನಾದೀ ||
ಜೀವ ಅನಾದಿ ಅನಂತ | ಕರ್ಮ ದ್ವಿವಿಧ ತಿಳಿಯೋ ಸಂತ || ೩೩ ||
ಸರ್ವಜೀವ ಅನಾದೀಕರ್ಮಾ| ಭವ್ಯಪ್ರಾಣಿ ತ್ಯಾಗಪಾಪಕರ್ಮಾ ||
ಅಭವ್ಯಪ್ರಾಣಿಗೆ ಕರ್ಮಾನಂತಾ | ಜನ್ಮಮರಣ ಇಲ್ಲಾ ಅಂತಾ|೩೪|
ಸ್ಪರ್ಶರಸನಾಗಂಧವರ್ಣಾ| ಸ್ವರೈದು ತಿಳಿವ ಜ್ಞಾನಪ್ರಾಣಾ ||
ವಾಚ್ಯಾ ಹಲನಚಲನಾ | ಮಾಡುವದು ಜೀವಜ್ಞಾನಾ || ೩೫ ||
ಜೀವಕ್ಕ ಸಂಪೂರ್ಣಜ್ಞಾನಾ | ತ್ಯಾಗಾಗುವದು ಅಭಿಮಾನಾ ||
ದೃಷ್ಟಿಗೋಚರ ಸಂಪೂರ್ಣಾ| ಜೀವಾಜೀವ ದ್ರವ್ಯಪ್ರಾಣಾ |೩೬|
ತಿಳಿವದು ಸ್ವಪ್ರಾಣಜ್ಞಾನಾ| ವಿಷಯಕಷಾಯ ತ್ಯಾಗನುನಾ |
ಕರ್ಮಾಸ್ರವ ಭಾವಸಂವರಾ| ಪೂರ್ವಾರ್ಜಿತ ಕರ್ಮನಿರ್ಜರಾ |೩೭|
ಪ್ರಥಮ ಜೀವಶ್ರದ್ಧಾನ ಜ್ಞಾನಾ | ವೈರಾಗ್ಯ ಮನಭಾವಭಾವನಾ ||
ತಪ ಆಚಾರ ಪೂರ್ಣಜ್ಞಾನಾ| ಅಲ್ಲಿಂದ ಮೋಕ್ಷ ಸಾಧನಾ || ೩೮ ||
ಪುದ್ಗಲ ಚೈತನ್ಯ ಬಂಧನಾ | ಅನ್ನುವದು ಮೂರ್ಖ ಅಜ್ಞಾನಾ ||
ಜೀವಬಂಧ ಅಶುಭಭಾವನಾ | ನಿಶ್ಚಯ ತಿಳಿಯೋ ನೀ ಜ್ಞಾನಾ |೩೯|
ಕರ್ಮಾಸ್ರವ ಬಂಧನೆಜೀವಾ| ಕ್ರಿಯಾಕರ್ಮಪರಮಾತ್ಮಾ ಭಾವಾ||
ಜೀವ ಮನ ನಿಶ್ಚಯಜ್ಞಾನಾ | ಅಲ್ಲಿಂದ ಮೋಕ್ಷಸಾಧನಾ || ೪೦ ||
ಧನಲೋಭಿ ನರಾ ಅಜ್ಞಾನಾ | ಸೇವಾನರ ರಂಕಪ್ರಧಾನಾ ||
ಲೋಭಿ ಭೂಪಸೇವಾ | ಪೂರ್ಣಜ್ಞಾನಾ | ಪ್ರಯತ್ನ ಮೋಕ್ಷ
ಲಕ್ಷ್ಮೀಸಾಧನಾ || ೪೧ ||

ತ್ರೀಭೇದವ್ಯವಹಾರಜ್ಞಾನಾ | ಜೀವ ಸಂಪೂರ್ಣ ಶ್ರದ್ಧಾನಾ ||
ಭಹಿರಾತ್ಮಾ ಪರಮಾತ್ಮಜ್ಞಾನಾ | ಜ್ಞಾನ ನಿಶ್ಚಯು ಜೀವ
ಚೇತನಾ || ೪೨ ||

ಮಿಥ್ಯಾ ದೇವಗುರು ಶಾಸ್ತ್ರಶ್ರವಣಾ| ಅಧೋಗೆತಿ ಜೀವಜನ್ಮ
ಮರಣಾ ||

ಹಿತಾಹಿತ ಇಲ್ಲ ಜ್ಞಾನಾ | ಗೆತಿನಾಲ್ಕು ಜೀವಪತನಾ || ೪೩ ||
ಸ್ವಪರಜ್ಞಾನ ಸಂಪೂರ್ಣಾ | ಹೇಯೋಪಾದೇಯ ತ್ಯಾಗಪ್ರಾಣಾ ||
ಅವ್ರತ ದೇಶವ್ರತ ಮತಿಹೀನಾ | ಮಾಹಾವ್ರತ ಜೀವ
ಪೂರ್ಣಜ್ಞಾನಾ || ೪೪

ಯಾವ ಜ್ಞಾನದಿಂದಸಂಪೂರ್ಣಾ | ದೃಷ್ಟಿಗೋಚರಸಮುದರ್ಪಣಾ|
ಸಂಕಲ್ಪ ವಿಕಲ್ಪ ತ್ಯಾಗೆ ನೀನಾ | ಆತ್ಮಾಪರಮಾತ್ಮಾ
ಪೂರ್ಣಜ್ಞಾನಾ || ೪೫ ||

ಜೀವತ್ಯಾಗೆ ಭಾವಬಹಿರಾತ್ಮಾ | ಪ್ರಾಪ್ತಪ್ರಾಣ ಅಂತರಾತ್ಮಾ |
ಧ್ಯಾನ ಸದಾಸ್ವಹಿತ ಜೀವಾತ್ಮಾ| ಪ್ರಾಪ್ತಪದ ಪರಮಾತ್ಮಾ |೪೬|
ಹನೀ ಹನೀ ನೀರಸಾಗೆರಾ | ತಪಕ್ರಿಯಾ ಮುಕ್ತಿ ಸ್ತ್ರೀವರಾ ||
ಅದೇ ಪ್ರಕಾರ ಧ್ಯಾನ ಸಾಧನಾ | ಅನಂತ ಸೌಖ್ಯ
ಮುಕ್ತಿಸಾಧನಾ || ೪೭ ||

ಸರ್ವ ಆಗೆಮ ಸಾರಜ್ಞಾನಾ | ದಯಾ ಧರ್ಮ ತಿಳಿಯೋ ನೀನಾ ||
ಇಂದ್ರಪೂಜಾಸರ್ವಜ್ಞದೇವಾ| ಅದೇಪ್ರಕಾರ ನಿನ್ನ ಜೀವಾ |೪೮|
ಸೋಹಂ ಸೋಹಂ ಜಾಪ ನೀನಾ | ಸರ್ವರಿಗೇ ಜೀವಪೂಜಾಮಾನಾ|
ಸತ್ಸಂಗೆ ಪ್ರಾಪ್ತ ನೀ ಜೀವಾ | ಅನಂತಕಾಲ ಸುಖಸದ್ಯೆವಾ |೪೯|
ಆಧ್ಯಾತ್ಮ ಸ್ತೋತ್ರ ಪಠಣಾ | ತ್ಯಾಗೆ ಜೀವಜನ್ಮಮರಣಾ ||
ಧ್ಯಾನ ಅಧ್ಯಯನ ಮನಪೂರಾ || ಸಂಸಾರ ಅಸಾರ
ಶುಭ್ರಹೀರಾ || ೫೦ ||

**ಸಮಾಪ್ತ.**